# ಕರ್ನಾಟಕ ವಿಧಾನಸಭೆ

| | | |
|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 610 |
| 2 | ಸದಸ್ಯರ ಹೆಸರು | ಡಾ|| ಕೆ.ಶ್ರೀನಿವಾಸಮೂರ್ತಿ (ನೆಲಮಂಗಲ) |
| 3 | ವಿಷಯ | ಸೋಲೂರು ಹೋಬಳಿ ನೆಲಮಂಗಲಕ್ಕೆ ಕ್ಷೇತ್ರಕ್ಕೆ ಸೇರ್ಪಡೆ |
| 4 | ಉತ್ತರಿಸಬೇಕಾದ ದಿನಾಂಕ | 10.12.2018 |
| 5 | ಉತ್ತರಿಸುವ ಸಚಿವರು | ಕಂದಾಯ ಹಾಗೂ ಕೌಶಲ್ಯಾಭಿವೃದ್ಧಿ ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ನೆಲಮಂಗಲ ತಾಲ್ಲೂಕು ಸೋಲೂರು ಹೋಬಳಿಯನ್ನು ನೆಲಮಂಗಲ ವಿಧಾನಸಭಾ ಕ್ಷೇತ್ರಕ್ಕೆ ಸೇರ್ಪಡೆ ಗೊಳಿಸುವ ಕೋರಿಕೆ ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ |
| ಆ) | ಹಾಗಿದ್ದಲ್ಲಿ, ಈ ಪ್ರಸ್ತಾವನೆ ಸರ್ಕಾರದ ಅನುಮೋದನೆಗೆ ಯಾವಾಗ ಬಂದಿದೆ; (ದಿನಾಂಕದೊಂದಿಗೆ ವಿವರ ನೀಡುವುದು) | ದಿನಾಂಕ: 28.06.2018 ರಂದು ಮನವಿ ಸ್ವೀಕೃತವಾಗಿರುತ್ತದೆ. |
| ಇ) | ಈ ಪ್ರಸ್ತಾವನೆ ಸಲ್ಲಿಸಿದ ದಿನಾಂಕದಿಂದ ಇಲ್ಲಿಯವರೆಗೆ ಕೈಗೊಂಡಿರುವ ಕ್ರಮಗಳು ಯಾವ ಹಂತದಲ್ಲಿ ಇದೆ; (ವಿವರ ನೀಡುವುದು) | ರಾಮನಗರ ಜಿಲ್ಲೆಯ ಮಾಗಡಿ ತಾಲ್ಲೂಕಿನ ಸೋಲೂರು ಹೋಬಳಿಯನ್ನು ಮಾಗಡಿ ತಾಲ್ಲೂಕಿನಿಂದ ಬೇರ್ಪಡಿಸಿ ಬೆಂಗಳೂರು ಗ್ರಾಮಾಂತರ ಜಿಲ್ಲೆ ನೆಲಮಂಗಲ ತಾಲ್ಲೂಕಿಗೆ ಸೇರ್ಪಡೆಗೊಳಿಸುವ ಕುರಿತು ಕರ್ನಾಟಕ ಭೂಕಂದಾಯ ಅಧಿನಿಯಮ 1964 ರ ಪ್ರಕರಣ 4 ರನ್ವಯ ಪೂರ್ಣ ಪ್ರಮಾಣದ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಬೆಂಗಳೂರು ಗ್ರಾಮಾಂತರ/ರಾಮನಗರ ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ ಸೂಚಿಸಲಾಗಿರುತ್ತದೆ. ಜಿಲ್ಲಾಧಿಕಾರಿಗಳಿಂದ ಪ್ರಸ್ತಾವನೆ ಬಂದ ನಂತರ ಪರಿಶೀಲಿಸಿ ಅಗತ್ಯ ಕ್ರಮ ಜರುಗಿಸಲಾಗುವುದು. |
| ಈ) | 2018-19ನೇ ಸಾಲಿನ ಅವಧಿಯಲ್ಲಿ ಈ ಯೋಜನೆ ಕಾರ್ಯರೂಪಕ್ಕೆ ಬರಬಹುದೇ; | |
| ಉ) | ಪ್ರಸ್ತಾವನೆ ಸಲ್ಲಿಸಿರುವ ವಿಷಯಕ್ಕೆ ಅಡೆ ತಡೆಗಳೇನಾದರೂ ಇವೆಯೇ? (ವಿವರ ನೀಡುವುದು) | |

ಕಂಇ 115 ಭೂದಾಸು 2018

(ಆರ್.ವಿ. ದೇಶಪಾಂಡೆ)
ಕಂದಾಯ ಹಾಗೂ ಕೌಶಲ್ಯಾಭಿವೃದ್ಧಿ
ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು



ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 565 |
| ಸದಸ್ಯರ ಹೆಸರು | : | ಶ್ರೀ ಬಿ.ಶ್ರೀರಾಮುಲು(ಮೊಳಕಾಲ್ಮೂರು) |
| ಉತ್ತರಿಸುವ ದಿನಾಂಕ | : | 10.12.2018 |
| ಉತ್ತರಿಸುವ ಸಚಿವರು | : | ಕಂದಾಯ ಹಾಗೂ ಕೌಶಲ್ಯ ಅಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ಗ್ರಾಮ ಲೆಕ್ಕಿಗರ ಸಹಾಯಕರಾಗಿ ಕರ್ತವ್ಯ ನಿರ್ವಹಿಸುತ್ತಿರುವ ನೌಕರರ ಸಂಖ್ಯೆ ಎಷ್ಟು; | ರಾಜ್ಯದಲ್ಲಿ ಗ್ರಾಮ ಲೆಕ್ಕಿಗರ ಸಹಾಯಕರಾಗಿ ಹಾಲಿ ಒಟ್ಟು 9,793 ಗ್ರಾಮ ಸಹಾಯಕರು ಕರ್ತವ್ಯ ನಿರ್ವಹಿಸುತ್ತಿದ್ದಾರೆ. |
| (ಆ) | ಹಾಲಿ ಇವರಿಗೆ ನೀಡುತ್ತಿರುವ ವೇತನವೆಷ್ಟು; ಇವರುಗಳಿಗೆ ಇತರೇ ಸೌಲಭ್ಯಗಳನ್ನು ಸರ್ಕಾರ ನೀಡುತ್ತಿದೆಯೆ; (ವಿವರ ನೀಡುವುದು) | ದಿನಾಂಕ 01.04.2018ರಿಂದ ಗ್ರಾಮ ಸಹಾಯಕರಿಗೆ ಮಾಸಿಕ ರೂ. 12,000/-ಗಳ ಮಿತವೇತನವನ್ನು ಪಾವತಿಸಲಾಗುತ್ತಿದೆ. ಮಿತವೇತನವನ್ನು ಹೊರತುಪಡಿಸಿ ಗ್ರಾಮ ಸಹಾಯಕರಿಗೆ ಇತರೆ ಯಾವುದೇ ಸೌಲಭ್ಯಗಳನ್ನು ನೀಡಿರುವುದಿಲ್ಲ. |
| (ಇ) | ಸದರಿ ನೌಕರರನ್ನು ಖಾಯಂ ಮಾಡಲು ಸರ್ಕಾರ ಇದುವರೆಗೆ ಕೈಗೊಂಡ ಕ್ರಮಗಳೇನು; (ವಿವರವಾಗಿ ತಿಳಿಸುವುದು) | ಸರ್ಕಾರದ ಆದೇಶ ಸಂಖ್ಯೆ ಕಂಇ 01 ಬಿಎಸ್‌ಸಿ 2005 ದಿನಾಂಕ 10.07.2007ರಲ್ಲಿ 10,450 ಗ್ರಾಮ ಸಹಾಯಕರ ಹುದ್ದೆಗಳನ್ನು ಮಿತವೇತನದ ಆಧಾರದ ಮೇಲೆ ಖಾಯಂ ಆಗಿ ಮುಂದುವರಿಸಿ ಆದೇಶಿಸಲಾಗಿದೆ. |
| (ಈ) | ಸದರಿ ನೌಕರರನ್ನು ಖಾಯಂಗೊಳಿಸಲು ಏನಾದರೂ ಕಾನೂನು ತೊಡಕುಗಳಿವೆಯೇ; (ವಿವರವಾಗಿ ತಿಳಿಸುವುದು) | ಸಿವಿಲ್ ಅಪೀಲು ಸಂಖ್ಯೆ 4559-4562/1998ರಲ್ಲಿ ಮಾನ್ಯ ಸರ್ವೋಚ್ಚ ನ್ಯಾಯಾಲಯವು ದಿನಾಂಕ 06.11.2003ರಂದು ನೀಡಿರುವ ತೀರ್ಪಿನನುಸಾರ ಗ್ರಾಮ ಸಹಾಯಕರನ್ನು ಸರ್ಕಾರಿ ಸೇವೆಯಲ್ಲಿ ಸಕ್ರಮಗೊಳಿಸಲು ಅವಕಾಶವಿರುವುದಿಲ್ಲ. |
| (ಉ) | ಇವರಿಗೆ ಸೇವಾ ಭದ್ರತೆ ಹಾಗೂ ಇನ್ನಿತರ ಸವಲತ್ತುಗಳನ್ನು ನೀಡಲಾಗಿದೆಯೇ? | ಗ್ರಾಮ ಸಹಾಯಕರು 65 ವರ್ಷ ವಯಸ್ಸು ಪೂರ್ಣಗೊಳಿಸುವವರೆಗೆ ಸೇವೆಯಲ್ಲಿ ಮುಂದುವರೆಯಲು ಅವಕಾಶ ಕಲ್ಪಿಸಲಾಗಿದೆ |

ಸಂಖ್ಯೆ: ಕಂಇ 273 ಬಿಎಸ್‌ಐ 2018

(ಆರ್.ವಿ.ದೇಶಪಾಂಡೆ)
ಕಂದಾಯ ಹಾಗೂ ಕೌಶಲ್ಯ ಅಭಿವೃದ್ಧಿ,
ಉದ್ಯಮಶೀಲತೆ ಮತ್ತು ಜೀವನೋಪಾಯ
ಸಚಿವರು.

# ಕರ್ನಾಟಕ ವಿಧಾನಸಭೆ

(15ನೇ ವಿಧಾನಸಭೆ, 2ನೇ ಅಧಿವೇಶನ)

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 78
2) ಸದಸ್ಯರ ಹೆಸರು : ಡಾ॥ ಅಂಜಲಿ ಹೇಮಂತ್ ನಿಂಬಾಳ್ಕರ್ (ಖಾನಾಪೂರ)
3) ಉತ್ತರಿಸುವ ದಿನಾಂಕ : 10.12.2018
4) ಉತ್ತರಿಸುವವರು : ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

<table>
<tr><th>ಕ್ರ ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಬೆಳಗಾವಿ ಜಿಲ್ಲೆ ಖಾನಾಪುರ ತಾಲ್ಲೂಕಿನಲ್ಲಿ ರೈತರು ಬೆಳೆದ ಬೆಳೆಗಳು ಕಾಡು ಪ್ರಾಣಿಗಳ ಹಾವಳಿಯಿಂದ ನಾಶವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;</td><td>ಹೌದು.</td></tr>
<tr><td>ಆ)</td><td>ಹಾಗಿದ್ದಲ್ಲಿ, ಕಾಡುಪ್ರಾಣಿಗಳ ಹಾವಳಿಯಿಂದ ಬೆಳೆಗಳನ್ನು ರಕ್ಷಿಸಲು ಸರ್ಕಾರವು ಕೈಗೊಂಡಿರುವ ಕ್ರಮಗಳೇನು;</td><td>ವನ್ಯಪ್ರಾಣಿಗಳ ಚಲನವಲನಗಳ ಸೂಕ್ಷ್ಮ ಮತ್ತು ಅತಿಸೂಕ್ಷ್ಮ ಪ್ರದೇಶಗಳನ್ನು ಗುರುತಿಸಿ, ಸದರಿ ಪ್ರದೇಶಗಳಲ್ಲಿ ಸೌರಶಕ್ತಿ ಬೇಲಿ, ಆನೆ ನಿರೋಧಕ ಕಂದಕ ಹಾಗೂ ಅರಣ್ಯ ರಕ್ಷಣೆ ಶಿಬಿರಗಳನ್ನು ನಿರ್ಮಿಸಲಾಗಿದೆ.</td></tr>
<tr><td>ಇ)</td><td>ಕಾಡು ಪ್ರಾಣಿಗಳಿಂದ ಬೆಳೆಗಳ ರಕ್ಷಣೆಗಾಗಿ ಸೋಲಾರ್ ಬೇಲಿ ಹಾಕಿಕೊಡುವ ಯೋಜನೆಯಡಿ ಕಳೆದ ಮೂರು ವರ್ಷಗಳಲ್ಲಿ ಖಾನಾಪೂರ ತಾಲ್ಲೂಕಿನಲ್ಲಿ ಎಷ್ಟು ಕಿ.ಮೀ. ಅಳವಡಿಸಲಾಗಿದೆ ಮತ್ತು ಪ್ರಯೋಜನ ಪಡೆದ ಫಲಾನುಭವಿಗಳೆಷ್ಟು; ಪ್ರಸಕ್ತ ಸಾಲಿಗೆ ಬಿಡುಗಡೆಯಾದ ಅನುದಾನವೆಷ್ಟು;</td><td>ಆನೆಗಳು ಹೆಚ್ಚಾಗಿ ಕಂಡುಬರುವ ಪ್ರದೇಶಗಳಾದ ಬಾಮನಕೊಪ್ಪ ಮತ್ತು ಜಂಗಮನಹಟ್ಟಿ ಗ್ರಾಮಗಳಲ್ಲಿ ಅರಣ್ಯ ಪ್ರದೇಶದಿಂದ ಆನೆಗಳು ಗ್ರಾಮಗಳಿಗೆ ಬಾರದಂತೆ ರಸ್ತೆಗೆ 10 ಕಿ.ಮೀ. ಸೌರಶಕ್ತಿ ಬೇಲಿಯನ್ನು ನಿರ್ಮಿಸಲಾಗಿರುತ್ತದೆ. ಇದರಲ್ಲಿ ವೈಯಕ್ತಿಕ ಫಲಾನುಭವಿಗಳಿರುವುದಿಲ್ಲ. ಆದರೆ ಒಟ್ಟಾರೆ ಇದರಿಂದ ಗ್ರಾಮಸ್ಥರಿಗೆ ಪ್ರಯೋಜನವಾಗಿರುತ್ತದೆ.<br><table><tr><th>ಯೋಜನೆ</th><th>ವರ್ಷ</th><th>ಸೌರಶಕ್ತಿ ಬೇಲಿ ನಿರ್ಮಾಣ (ಕಿ.ಮೀ.ಗಳಲ್ಲಿ)</th><th>ಅನುದಾನ (ರೂ ಲಕ್ಷಗಳಲ್ಲಿ)</th></tr><tr><td>ಕಾಂಪಾ</td><td>2015–16</td><td>10</td><td>26.00</td></tr><tr><td></td><td>2016–17</td><td>–</td><td>–</td></tr><tr><td></td><td>2017–18</td><td>–</td><td>–</td></tr><tr><td></td><td>ಒಟ್ಟು</td><td>10</td><td>26.00</td></tr></table></td></tr>
<tr><td>ಈ)</td><td>ಬಾಕಿ ಉಳಿದ ಪ್ರದೇಶದಲ್ಲಿ ಶೀಘ್ರವಾಗಿ ಸೋಲಾರ್ ಬೇಲಿ ಅಳವಡಿಸಲು ಸರ್ಕಾರ ಕೈಗೊಳ್ಳುವ ಕ್ರಮಗಳೇನು?</td><td>2018–19ನೇ ಸಾಲಿನಲ್ಲಿ 32 ಫಲಾನುಭವಿಗಳಿಗೆ 18.94 ಕಿ.ಮೀ. ಸೌರಶಕ್ತಿ ಬೇಲಿ ನಿರ್ಮಿಸುವ ಪ್ರಸ್ತಾವನೆಯು ಪರಿಶೀಲನೆಯಲ್ಲಿದೆ.</td></tr>
</table>

ಸಂಖ್ಯೆ: ಅಪಜೀ 171 ಎಫ್‌ಡಬ್ಲ್ಯೂಎಲ್ 2018

(ಆರ್. ಶಂಕರ್)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 393
ಸದಸ್ಯರ ಹೆಸರು : ಶ್ರೀ ಸಂಜೀವ್ ಮಠಂದೂರ್ (ಪುತ್ತೂರು)
ಉತ್ತರಿಸುವ ದಿನಾಂಕ : 10-12-2018
ಉತ್ತರಿಸುವ ಸಚಿವರು : ಮಾನ್ಯ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

*****

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ತಾಲ್ಲೂಕಿನ ಬಿಳಿನೆಲೆ ಗ್ರಾಮದಲ್ಲಿರುವ ಕೇಂದ್ರೀಯ ತೋಟದ ಬೆಳೆಗಳ ಸಂಶೋಧನಾ ಕೇಂದ್ರ ನೆಬ್ಬಣ (c.p.c.r.i) ಇದರ ಅರಣ್ಯ ಇಲಾಖೆ ಭೂಮಿಯ ಕರಾರು ಮುಕ್ತಾಯವಾಗಿದೆಯೇ; ಹಾಗಿದ್ದಲ್ಲಿ, ಕರಾರು (Lease) ನವೀಕರಣ ಆಗಿದೆಯೇ; | ರಾಜ್ಯ ಸರಕಾರದ ಆದೇಶ ಸಂಖ್ಯೆ: AFD 212 FGL 70 ದಿನಾಂಕ 31-12-1970 ಮತ್ತು AFD 185 FGL 72 ದಿನಾಂಕ 02-03-1973 ರನ್ವಯ ಪ್ರಶ್ನಿತ ಉದ್ದೇಶಕ್ಕಾಗಿ 300 ಎಕರೆ ಅರಣ್ಯ ಭೂಮಿಯನ್ನು '30' ವರ್ಷಗಳ ಅವಧಿಗೆ ಗೇಣಿ ಆಧಾರದಲ್ಲಿ ಮಂಜೂರು ಮಾಡಿದ್ದು, ಗೇಣಿ ಅವಧಿಯು ದಿನಾಂಕ: 31-12-2000 ರಂದು ಮುಕ್ತಾಯಗೊಂಡಿರುತ್ತದೆ.<br><br>ತದನಂತರ ಉಪಯೋಗಿ ಸಂಸ್ಥೆಯು ದಿನಾಂಕ: 03-10-2004 ರಂದು ಪ್ರಶ್ನಿತ ಅರಣ್ಯ ಭೂಮಿಯನ್ನು ಅರಣ್ಯ (ಸಂರಕ್ಷಣೆ) ಕಾಯ್ದೆ, 1980ರಡಿ ಗೇಣಿ ಆಧಾರದಲ್ಲಿ ಮುಂದುವರೆಸಲು ಪ್ರಸ್ತಾವನೆ ಸಲ್ಲಿಸಿದ ಹಿನ್ನೆಲೆಯಲ್ಲಿ ಕೇಂದ್ರ ಸರಕಾರವು ದಿನಾಂಕ: 19-06-2006ರ ಪತ್ರದಲ್ಲಿ ಅರಣ್ಯ (ಸಂರಕ್ಷಣೆ) ಕಾಯ್ದೆ, 1980 ರಡಿ ಈ ಉದ್ದೇಶಕ್ಕಾಗಿ 121.41 ಹೆ. ಅರಣ್ಯ ಭೂಮಿಯನ್ನು ದಿನಾಂಕ: 01-01-2001 ರಿಂದ ಪೂರ್ವಾನ್ವಯವಾಗುವಂತೆ '30' ವರ್ಷಗಳ ಅವಧಿಗೆ ಬಿಡುಗಡೆ (diversion) ಮಾಡಲು ಸ್ಟೇಜ್-I (ತಾತ್ವಿಕ) ಅನುಮೋದನೆ (ಷರತ್ತುಬದ್ಧ) ನೀಡಿದೆ. |
| ಆ) | ಆಗದಿದ್ದಲ್ಲಿ, ನವೀಕರಣಕ್ಕೆ ಗುತ್ತಿಗೆ ನೀಡಲಾಗುವುದೇ (ಅರಣ್ಯ ಇಲಾಖೆ) ಈ ಬಗ್ಗೆ ಸರಕಾರವು ಯಾವ ಕ್ರಮ ಕೈಗೊಳ್ಳಲಾಗುವುದು? | ಕೇಂದ್ರ ಸರಕಾರವು ತನ್ನ ದಿನಾಂಕ: 19-06-2006ರ ಸ್ಟೇಜ್-I (ತಾತ್ವಿಕ) ಅನುಮೋದನೆಯಲ್ಲಿ ವಿಧಿಸಿರುವ ಷರತ್ತುಗಳ ಅನುಪಾಲನೆಯನ್ನು ಉಪಯೋಗಿ ಸಂಸ್ಥೆಯು ಇದುವರೆಗೆ ಕೈಗೊಳ್ಳದಿರುವುದರಿಂದ ಹಾಗೂ ಷರತ್ತುವಾರು ಅನುಸರಣಾ ವರದಿಯನ್ನು ಇಲ್ಲಿಯವರೆಗೂ ಸಲ್ಲಿಸದೇ ಇರುವುದರಿಂದ ಈ ಪ್ರಸ್ತಾವನೆಗೆ 1980ರ ಅರಣ್ಯ (ಸಂರಕ್ಷಣೆ) ಕಾಯ್ದೆಯಡಿ ಅಂತಿಮ (ಸ್ಟೇಜ್-II) ಅನುಮೋದನೆ ದೊರೆತಿರುವುದಿಲ್ಲ.<br><br>ಆದ್ದರಿಂದ ಅನುಪಾಲನಾ ವರದಿಯನ್ನು ಸಲ್ಲಿಸುವಂತೆ ಕಾಲಕಾಲಕ್ಕೆ ಸಂಬಂಧಿತ ಉಪಯೋಗಿ ಸಂಸ್ಥೆಗೆ ತಿಳಿಸಲಾಗಿರುತ್ತದೆ. ಅನುಪಾಲನಾ ವರದಿ ಬಂದಲ್ಲಿ ಸ್ಟೇಜ್-2 ಅನುಮತಿಯನ್ನು ನೀಡುವಂತೆ ಕೇಂದ್ರ ಸರ್ಕಾರವನ್ನು ಕೋರಲಾಗುವುದು. |

ಸಂಖ್ಯೆ: ಎಫ್‌ಇಇ 79 ಎಫ್‌ಎಲ್‌ಎಲ್ 2018

(ಆರ್. ಶಂಕರ್)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

--

# ಕರ್ನಾಟಕ ವಿಧಾನಸಭೆ

| | | |
|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 362 |
| 2 | ಸದಸ್ಯರ ಹೆಸರು | ಶ್ರೀ ಸಿದ್ದು ಸವದಿ (ತೇರದಾಳ) |
| 3 | ವಿಷಯ | ಭೂಮಾಪಕರ ಕೊರತೆ |
| 4 | ಉತ್ತರಿಸಬೇಕಾದ ದಿನಾಂಕ | 10.12.2018 |
| 5 | ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ತೇರದಾಳ ತಾಲ್ಲೂಕಿನಲ್ಲಿ ಭೂ ಮಾಪಕರ ಸಂಖ್ಯೆ ಕಡಿಮೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಯಾವ ಕ್ರಮ ಕೈಗೊಳ್ಳಲಾಗಿದೆ (ಸಂಪೂರ್ಣ ಮಾಹಿತಿ ಒದಗಿಸುವುದು); | ಬಾಗಲಕೋಟೆ ಜಿಲ್ಲೆಯಲ್ಲಿ ತೇರದಾಳ ತಾಲ್ಲೂಕು ಎಂದು ಘೋಷಣೆಯಾಗಿರುವುದಿಲ್ಲ. ಈ ಜಿಲ್ಲೆಯ ಜಮಖಂಡಿ ತಾಲ್ಲೂಕಿನಿಂದ ರಬಕವಿ-ಬನಹಟ್ಟಿ ಎಂದು ಹೊಸ ತಾಲ್ಲೂಕನ್ನು ರಚಿಸಲಾಗಿದ್ದು ಸದರಿ ತಾಲ್ಲೂಕಿನಲ್ಲಿ ತೆರದಾಳ ಗ್ರಾಮವು ಹೋಬಳಿ ಕೇಂದ್ರವಾಗಿರುತ್ತದೆ. ಈ ಹೊಸ ರಬಕವಿ-ಬನಹಟ್ಟಿ ತಾಲ್ಲೂಕಿಗೆ ಮೂಲ ಜಮಖಂಡಿ ತಾಲ್ಲೂಕಿನಿಂದ ಹಂಚಿಕೆಯಾದ 21 ಗ್ರಾಮಗಳು ಹಾಗೂ ಮುಧೋಳ ತಾಲ್ಲೂಕಿನಿಂದ ಹಂಚಿಕೆಯಾದ 10 ಗ್ರಾಮಗಳು ಒಳಗೊಂಡು, ಒಟ್ಟು 31 ಗ್ರಾಮಗಳ ಒಂದು ಹೊಸ ತಾಲ್ಲೂಕು ರಚನೆಯಾಗಿರುತ್ತದೆ. ಹೊಸ ತಾಲ್ಲೂಕಿನಲ್ಲಿ ಭೂಮಾಪಕರ ಸಂಖ್ಯೆ ಕಡಿಮೆ ಇರುವುದು ಸರಕಾರದ ಗಮನಕ್ಕೆ ಬಂದಿರುತ್ತದೆ. ರಬಕವಿ-ಬನಹಟ್ಟಿ ಹೊಸ ತಾಲ್ಲೂಕಿಗೆ ಭೂದಾಖಲೆಗಳ ಸಹಾಯಕ ನಿರ್ದೇಶಕರ ಕಛೇರಿಯನ್ನು ತೆರೆಯಲಾಗಿದ್ದು, ಜಮಖಂಡಿ ತಾಲ್ಲೂಕಿನಲ್ಲಿ ಕಾರ್ಯನಿರ್ವಹಿಸುತ್ತಿರುವ ಭೂದಾಖಲೆಗಳ ಸಹಾಯಕ ನಿರ್ದೇಶಕರನ್ನು ಪ್ರಭಾರದ ಮೇಲೆ ಕಾರ್ಯ ನಿರ್ವಹಿಸಲು ವ್ಯವಸ್ಥೆ ಮಾಡಲಾಗಿದೆ. ಒಟ್ಟು 11 ಸರಕಾರಿ ಭೂಮಾಪಕರು, 3 ಜನ ಪರವಾನಗಿ ಭೂಮಾಪಕರು, ಒಬ್ಬ ನಾಡ ಕಛೇರಿ ಆಪರೇಟರ್ ಹಾಗೂ ಇಬ್ಬರು ಪರ್ಯಾವೇಕ್ಷಕರು ನಿಯೋಜನೆ ಮೇರೆಗೆ ಕಾರ್ಯ ನಿರ್ವಹಿಸುತ್ತಿರುತ್ತಾರೆ. |

| | | |
|---|---|---|
| ಆ) | ರೈತರು ಭೂಮಿ ಸರ್ವೆಗೆ ಅರ್ಜಿ ಹಾಕಿ 2 ರಿಂದ 3 ವರ್ಷಗಳವರೆಗೆ ಕಾಯುವಂತಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಯಾವ ಕ್ರಮ ಕೈಗೊಳ್ಳಲಾಗಿದೆ (ಸಂಪೂರ್ಣ ಮಾಹಿತಿ ಒದಗಿಸುವುದು); | ರೈತರು ಭೂಮಿ ಸರ್ವೆಗೆ ಅರ್ಜಿ ಹಾಕಿ 2 ರಿಂದ 3 ವರ್ಷಗಳ ವರೆಗೆ ಕಾಯುವಂತಾಗಿರುವುದು ಸರಕಾರದ ಗಮನಕ್ಕೆ ಬಂದಿದೆ. ಈ ಪೈಕಿ ಪಹಣಿ ತಿದ್ದುಪಡಿ ಮತ್ತು ನಶಿಸಿ ಹೋದ ದಾಖಲೆಗಳ ಪುನರ್ ನಿರ್ಮಾಣಕ್ಕೆ ಒಳಪಟ್ಟಲ್ಲಿ ವಿಳಂಬವಾಗುತ್ತವೆ. ಇವುಗಳಿಗೆ ಶೀಘ್ರವಾಗಿ ಕ್ರಮಕೈಗೊಳ್ಳಲು ಸೂಚನೆ ನೀಡಲಾಗಿದೆ. ಜಮಖಂಡಿ ಹಾಗೂ ರಬಕವಿ-ಬನಹಟ್ಟಿ ತಾಲ್ಲೂಕಿನ ತೇರದಾಳ ಹೊಬಳಿ ಸೇರಿದಂತೆ 1 ವರ್ಷಕ್ಕೂ ಮೇಲ್ಪಟ್ಟ ಹಳೆ ಪ್ರಕರಣಗಳ ವಿಲೇವಾರಿ ಕುರಿತು ಈ ಜಿಲ್ಲೆಯ ಬದಾಮಿ, ಹುನಗುಂದ ಹಾಗೂ ಬೀಳಗಿ ತಾಲ್ಲೂಕುಗಳಿಂದ ಹಾಲಿ ಇದ್ದ ಸರಕಾರಿ ಭೂಮಾಪಕರುಗಳೊಂದಿಗೆ 11 ಜನ ಸರಕಾರಿ ಭೂಮಾಪಕರನ್ನು ಮಾಹೆ ಜುಲೈ 2018 ರಿಂದ ಸೆಪ್ಟೆಂಬರ 2018 ರವರೆಗೆ ನಿಯೋಜನೆ ಮೇಲೆ ನಿಯೋಜಿಸಿ ಒಂದು ವರ್ಷಕ್ಕೂ ಮೇಲ್ಪಟ್ಟು 1030 ಅಳತೆಗಾಗಿ ಬಾಕಿ ಇರುವ ಪ್ರಕರಣಗಳಲ್ಲಿ 830 ಪ್ರಕರಣಗಳನ್ನು ವಿಲೇವಾರಿ ಮಾಡಿದ್ದು, 200 ಪ್ರಕರಣಗಳು ಬಾಕಿ ಉಳಿದಿದ್ದು, ನವೆಂಬರ್ 2018ರ ಅಂತ್ಯಕ್ಕೆ ರಬಕವಿ ಬನಹಟ್ಟಿ ತಾಲ್ಲೂಕಿನಲ್ಲಿ ಒಟ್ಟು 1193 ಪ್ರಕರಣಗಳು ಬಾಕಿ ಉಳಿದಿದ್ದು, ಸದರಿ ಪ್ರಕರಣಗಳನ್ನು ಆದ್ಯತೆ ಮೇರೆಗೆ ವಿಲೆ ಮಾಡಲಾಗುವುದು |
| ಇ) | ಹೊಸ ತಾಲ್ಲೂಕಿಗೆ ಪ್ರತ್ಯೇಕ ಭೂಮಾಪಕರನ್ನು ಯಾವಾಗ ಭರ್ತಿ ಮಾಡಲಾಗುವುದು ಮತ್ತು ನಿಯಮಾನುಸಾರ ಎಷ್ಟು ಭೂಮಾಪಕರನ್ನು ಭರ್ತಿ ಮಾಡ ಲಾಗುವುದು? | ಹೊಸದಾಗಿ ರಚನೆಯಾದ ರಬಕವಿ-ಬನಹಟ್ಟಿ ತಾಲ್ಲೂಕಿಗೆ ಭೂದಾಖಲೆಗಳ ಸಹಾಯಕ ನಿರ್ದೇಶಕರ ಕಛೇರಿಗೆ ಅಗತ್ಯ ಇರುವ ಎಲ್ಲಾ ವೃಂದದ ಹುದ್ದೆಗಳನ್ನು ಸೃಜನೆ ಮಾಡುವ ಪ್ರಸ್ತಾವನೆ ಸರಕಾರದ ಪರಿಶೀಲನೆಯಲ್ಲಿದೆ. |

ಕಂಇ 216 ಭೂದಾಸ 2018

(ಆರ್.ವಿ. ದೇಶಪಾಂಡೆ)
ಕಂದಾಯ ಹಾಗೂ ಕೌಶಲ್ಯಾಭಿವೃದ್ಧಿ,
ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 410
ಸದಸ್ಯರ ಹೆಸರು : ಶ್ರೀ ಐಹೊಳೆ ಡಿ. ಮಹಾಲಿಂಗಪ್ಪ (ರಾಯಭಾಗ)
ಉತ್ತರಿಸುವ ಸಚಿವರು : ಕಂದಾಯ ಸಚಿವರು
ಉತ್ತರಿಸುವ ದಿನಾಂಕ : 10.12.2018

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಗ್ರಾಮ ಲೆಕ್ಕಾಧಿಕಾರಿಗಳಾಗಿ ಮತ್ತು ಕಂದಾಯ ನಿರೀಕ್ಷಕರಾಗಿ ಕರ್ತವ್ಯ ನಿರ್ವಹಿಸುತ್ತಿರುವ ನೌಕರರುಗಳಿಗೆ ಕೇಂದ್ರ ಸ್ಥಾನದಲ್ಲಿ ಕಛೇರಿ ಮತ್ತು ವಸತಿ ಗೃಹಗಳು ಇಲ್ಲದೇ ಇವರುಗಳು ತಾಲ್ಲೂಕಿನ ಕೇಂದ್ರ ಭಾಗಗಳಲ್ಲಿ ಕಛೇರಿಯನ್ನು ತೆರೆದು ಕರ್ತವ್ಯ ನಿರ್ವಹಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ರಾಜ್ಯದಲ್ಲಿ ಕಂದಾಯ ನಿರೀಕ್ಷಕರಿಗೆ ಹಾಗೂ ಗ್ರಾಮ ಲೆಕ್ಕಿಗರುಗಳಿಗೆ ಅವರ ಕೇಂದ್ರ ಸ್ಥಾನದಲ್ಲಿ ವಸತಿ ಗೃಹ/ಸರ್ಕಾರಿ ಕಟ್ಟಡಗಳು ಲಭ್ಯವಿರುವ ಕಡೆಗಳಲ್ಲಿ ಅವುಗಳನ್ನೇ ಕಛೇರಿಗಳಾಗಿ ಉಪಯೋಗಿಸಲಾಗುತ್ತಿದೆ. ಸ್ವಂತ ಕಟ್ಟಡ ಇಲ್ಲದೇ ಇರುವ ಕಡೆಗಳಲ್ಲಿ ಬಾಡಿಗೆಗೆ ಕಟ್ಟಡಗಳನ್ನು ಪಡೆದು ಆಯಾಯ ಕೇಂದ್ರ ಸ್ಥಳಗಳಲ್ಲಿ ಕಛೇರಿಗಳನ್ನು ತೆರೆಯಲಾಗಿರುತ್ತದೆ. |
| ಆ) | ಬಂದಿದ್ದಲ್ಲಿ, ಅವರುಗಳ ಸೇವೆಯು ಸಾರ್ವಜನಿಕರಿಗೆ ತಕ್ಷಣ ಸಿಗದೇ ತೊಂದರೆ ಅನುಭವಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕಂದಾಯ ನಿರೀಕ್ಷಕರುಗಳು ಮತ್ತು ಗ್ರಾಮಲೆಕ್ಕಾಧಿಕಾರಿಗಳಿಗೆ ಪ್ರತಿ ದಿನ ಗ್ರಾಮಗಳಿಗೆ ಭೇಟಿ ನೀಡಿ ಸಾರ್ವಜನಿಕರ ಕೆಲಸ ಕಾರ್ಯಗಳನ್ನು ನಿರ್ವಹಿಸಲು ಆಯಾಯ ಜಿಲ್ಲಾಧಿಕಾರಿಗಳು ಸೂಕ್ತ ನಿರ್ದೇಶನ ನೀಡಿರುತ್ತಾರೆ. |
| ಇ) | ಹಾಗಿದ್ದಲ್ಲಿ, ಸಾರ್ವಜನಿಕರಿಗೆ ಅನಕೂಲ ಕಲ್ಪಿಸಿಕೊಡುವ ಸಲುವಾಗಿ ಇವರುಗಳ ಕೇಂದ್ರ ಸ್ಥಾನದಲ್ಲಿ ಕಛೇರಿ, ವಸತಿ ಗೃಹ ಹಾಗೂ ಮೂಲಭೂತ ಸೌಕರ್ಯಗಳನ್ನು ಒದಗಿಸುವ ಪ್ರಸ್ತಾವನೆಯು ಸರ್ಕಾರದ ಮುಂದಿದೆಯೇ; ಹಾಗಿದ್ದಲ್ಲಿ, ಯಾವ ಕಾಲಮಿತಿಯಲ್ಲಿ ಇವರುಗಳಿಗೆ ಕಛೇರಿ ಮತ್ತಿತರ ಮೂಲಭೂತ ಸೌಕರ್ಯ ಒದಗಿಸಲಾಗುವುದು; | ಪ್ರತಿ ತಾಲ್ಲೂಕಿನಲ್ಲಿ ತಲಾ 5 ಗ್ರಾಮ ಲೆಕ್ಕಾಧಿಕಾರಿಗಳಿಗೆ 5 ವಾಸದ ಜೊತೆ ಕಚೇರಿ ವಸತಿ ಗೃಹಗಳನ್ನು ನಿರ್ಮಿಸುವ ಪ್ರಸ್ತಾವನೆ ಸರ್ಕಾರದ ಮುಂದಿದ್ದು, ಈ ಕಾಮಗಾರಿಗಳನ್ನು ಹಂತ ಹಂತವಾಗಿ ಕೈಗೆತ್ತಿಕೊಳ್ಳುವ ಬಗ್ಗೆ ಆರ್ಥಿಕ ಇಲಾಖೆಯ ಅಭಿಪ್ರಾಯ ಪಡೆದು ಮುಂದಿನ ಸೂಕ್ತ ಕ್ರಮ ವಹಿಸಲಾಗುವುದು. |
| ಈ) | ಇಲ್ಲದಿದ್ದಲ್ಲಿ ಕಾರಣಗಳೇನು? (ವಿವರ ನೀಡುವುದು) | |

ಕಂಇ 79 ಡಬ್ಲ್ಯೂಬಿಜಿಆರ್ 2018

(ಆರ್.ವಿ. ದೇಶಪಾಂಡೆ)
ಕಂದಾಯ ಮತ್ತು ಕೌಶಲ್ಯಾಭಿವೃದ್ಧಿ,
ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 410
ಸದಸ್ಯರ ಹೆಸರು : ಶ್ರೀ ಐಹೊಳೆ ಡಿ. ಮಹಾಲಿಂಗಪ್ಪ (ರಾಯಭಾಗ)
ಉತ್ತರಿಸುವ ಸಚಿವರು : ಕಂದಾಯ ಸಚಿವರು
ಉತ್ತರಿಸುವ ದಿನಾಂಕ : 10.12.2018

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಗ್ರಾಮ ಲೆಕ್ಕಾಧಿಕಾರಿಗಳಾಗಿ ಮತ್ತು ಕಂದಾಯ ನಿರೀಕ್ಷಕರಾಗಿ ಕರ್ತವ್ಯ ನಿರ್ವಹಿಸುತ್ತಿರುವ ನೌಕರರುಗಳಿಗೆ ಕೇಂದ್ರ ಸ್ಥಾನದಲ್ಲಿ ಕಛೇರಿ ಮತ್ತು ವಸತಿ ಗೃಹಗಳು ಇಲ್ಲದೇ ಇವರುಗಳು ತಾಲ್ಲೂಕಿನ ಕೇಂದ್ರ ಭಾಗಗಳಲ್ಲಿ ಕಛೇರಿಯನ್ನು ತೆರೆದು ಕರ್ತವ್ಯ ನಿರ್ವಹಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ರಾಜ್ಯದಲ್ಲಿ ಕಂದಾಯ ನಿರೀಕ್ಷಕರಿಗೆ ಹಾಗೂ ಗ್ರಾಮ ಲೆಕ್ಕಿಗರುಗಳಿಗೆ ಅವರ ಕೇಂದ್ರ ಸ್ಥಾನದಲ್ಲಿ ವಸತಿ ಗೃಹ/ಸರ್ಕಾರಿ ಕಟ್ಟಡಗಳು ಲಭ್ಯವಿರುವ ಕಡೆಗಳಲ್ಲಿ ಅವುಗಳನ್ನೇ ಕಛೇರಿಗಳಾಗಿ ಉಪಯೋಗಿಸಲಾಗುತ್ತಿದೆ. ಸ್ವಂತ ಕಟ್ಟಡ ಇಲ್ಲದೇ ಇರುವ ಕಡೆಗಳಲ್ಲಿ ಬಾಡಿಗೆಗೆ ಕಟ್ಟಡಗಳನ್ನು ಪಡೆದು ಆಯಾಯ ಕೇಂದ್ರ ಸ್ಥಳಗಳಲ್ಲಿ ಕಛೇರಿಗಳನ್ನು ತೆರೆಯಲಾಗಿರುತ್ತದೆ. |
| ಆ) | ಬಂದಿದ್ದಲ್ಲಿ, ಅವರುಗಳ ಸೇವೆಯು ಸಾರ್ವಜನಿಕರಿಗೆ ತಕ್ಷಣ ಸಿಗದೇ ತೊಂದರೆ ಅನುಭವಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕಂದಾಯ ನಿರೀಕ್ಷಕರುಗಳು ಮತ್ತು ಗ್ರಾಮಲೆಕ್ಕಾಧಿಕಾರಿಗಳಿಗೆ ಪ್ರತಿ ದಿನ ಗ್ರಾಮಗಳಿಗೆ ಭೇಟಿ ನೀಡಿ ಸಾರ್ವಜನಿಕರ ಕೆಲಸ ಕಾರ್ಯಗಳನ್ನು ನಿರ್ವಹಿಸಲು ಆಯಾಯ ಜಿಲ್ಲಾಧಿಕಾರಿಗಳು ಸೂಕ್ತ ನಿರ್ದೇಶನ ನೀಡಿರುತ್ತಾರೆ. |
| ಇ) | ಹಾಗಿದ್ದಲ್ಲಿ, ಸಾರ್ವಜನಿಕರಿಗೆ ಅನಕೂಲ ಕಲ್ಪಿಸಿಕೊಡುವ ಸಲುವಾಗಿ ಇವರುಗಳ ಕೇಂದ್ರ ಸ್ಥಾನದಲ್ಲಿ ಕಛೇರಿ, ವಸತಿ ಗೃಹ ಹಾಗೂ ಮೂಲಭೂತ ಸೌಕರ್ಯಗಳನ್ನು ಒದಗಿಸುವ ಪ್ರಸ್ತಾವನೆಯು ಸರ್ಕಾರದ ಮುಂದಿದೆಯೇ; ಹಾಗಿದ್ದಲ್ಲಿ, ಯಾವ ಕಾಲಮಿತಿಯಲ್ಲಿ ಇವರುಗಳಿಗೆ ಕಛೇರಿ ಮತ್ತಿತರ ಮೂಲಭೂತ ಸೌಕರ್ಯ ಒದಗಿಸಲಾಗುವುದು; | ಪ್ರತಿ ತಾಲ್ಲೂಕಿನಲ್ಲಿ ತಲಾ 5 ಗ್ರಾಮ ಲೆಕ್ಕಾಧಿಕಾರಿಗಳಿಗೆ 5 ವಾಸದ ಜೊತೆ ಕಛೇರಿ ವಸತಿ ಗೃಹಗಳನ್ನು ನಿರ್ಮಿಸುವ ಪ್ರಸ್ತಾವನೆ ಸರ್ಕಾರದ ಮುಂದಿದ್ದು, ಈ ಕಾಮಗಾರಿಗಳನ್ನು ಹಂತ ಹಂತವಾಗಿ ಕೈಗೆತ್ತಿಕೊಳ್ಳುವ ಬಗ್ಗೆ ಆರ್ಥಿಕ ಇಲಾಖೆಯ ಅಭಿಪ್ರಾಯ ಪಡೆದು ಮುಂದಿನ ಸೂಕ್ತ ಕ್ರಮ ವಹಿಸಲಾಗುವುದು. |
| ಈ) | ಇಲ್ಲದಿದ್ದಲ್ಲಿ ಕಾರಣಗಳೇನು? (ವಿವರ ನೀಡುವುದು) | |

ಕಂಇ 79 ಡಬ್ಲ್ಯೂಬಿಆರ್ 2018

(ಆರ್.ವಿ. ದೇಶಪಾಂಡೆ)
ಕಂದಾಯ ಮತ್ತು ಕೌಶಲ್ಯಾಭಿವೃದ್ಧಿ,
ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 410
ಸದಸ್ಯರ ಹೆಸರು : ಶ್ರೀ ಐಹೊಳೆ ಡಿ. ಮಹಾಲಿಂಗಪ್ಪ (ರಾಯಭಾಗ)
ಉತ್ತರಿಸುವ ಸಚಿವರು : ಕಂದಾಯ ಸಚಿವರು
ಉತ್ತರಿಸುವ ದಿನಾಂಕ : 10.12.2018

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಗ್ರಾಮ ಲೆಕ್ಕಾಧಿಕಾರಿಗಳಾಗಿ ಮತ್ತು ಕಂದಾಯ ನಿರೀಕ್ಷಕರಾಗಿ ಕರ್ತವ್ಯ ನಿರ್ವಹಿಸುತ್ತಿರುವ ನೌಕರರುಗಳಿಗೆ ಕೇಂದ್ರ ಸ್ಥಾನದಲ್ಲಿ ಕಛೇರಿ ಮತ್ತು ವಸತಿ ಗೃಹಗಳು ಇಲ್ಲದೇ ಇವರುಗಳು ತಾಲ್ಲೂಕಿನ ಕೇಂದ್ರ ಭಾಗಗಳಲ್ಲಿ ಕಛೇರಿಯನ್ನು ತೆರೆದು ಕರ್ತವ್ಯ ನಿರ್ವಹಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ರಾಜ್ಯದಲ್ಲಿ ಕಂದಾಯ ನಿರೀಕ್ಷಕರಿಗೆ ಹಾಗೂ ಗ್ರಾಮ ಲೆಕ್ಕಿಗರುಗಳಿಗೆ ಅವರ ಕೇಂದ್ರ ಸ್ಥಾನದಲ್ಲಿ ವಸತಿ ಗೃಹ/ಸರ್ಕಾರಿ ಕಟ್ಟಡಗಳು ಲಭ್ಯವಿರುವ ಕಡೆಗಳಲ್ಲಿ ಅವುಗಳನ್ನೇ ಕಛೇರಿಗಳಾಗಿ ಉಪಯೋಗಿಸಲಾಗುತ್ತಿದೆ. ಸ್ವಂತ ಕಟ್ಟಡ ಇಲ್ಲದೇ ಇರುವ ಕಡೆಗಳಲ್ಲಿ ಬಾಡಿಗೆಗೆ ಕಟ್ಟಡಗಳನ್ನು ಪಡೆದು ಆಯಾಯ ಕೇಂದ್ರ ಸ್ಥಳಗಳಲ್ಲಿ ಕಛೇರಿಗಳನ್ನು ತೆರೆಯಲಾಗಿರುತ್ತದೆ. |
| ಆ) | ಬಂದಿದ್ದಲ್ಲಿ, ಅವರುಗಳ ಸೇವೆಯು ಸಾರ್ವಜನಿಕರಿಗೆ ತಕ್ಷಣ ಸಿಗದೇ ತೊಂದರೆ ಅನುಭವಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕಂದಾಯ ನಿರೀಕ್ಷಕರುಗಳು ಮತ್ತು ಗ್ರಾಮಲೆಕ್ಕಾಧಿಕಾರಿಗಳಿಗೆ ಪ್ರತಿ ದಿನ ಗ್ರಾಮಗಳಿಗೆ ಭೇಟಿ ನೀಡಿ ಸಾರ್ವಜನಿಕರ ಕೆಲಸ ಕಾರ್ಯಗಳನ್ನು ನಿರ್ವಹಿಸಲು ಆಯಾಯ ಜಿಲ್ಲಾಧಿಕಾರಿಗಳು ಸೂಕ್ತ ನಿರ್ದೇಶನ ನೀಡಿರುತ್ತಾರೆ. |
| ಇ) | ಹಾಗಿದ್ದಲ್ಲಿ, ಸಾರ್ವಜನಿಕರಿಗೆ ಅನುಕೂಲ ಕಲ್ಪಿಸಿಕೊಡುವ ಸಲುವಾಗಿ ಇವರುಗಳ ಕೇಂದ್ರ ಸ್ಥಾನದಲ್ಲಿ ಕಛೇರಿ, ವಸತಿ ಗೃಹ ಹಾಗೂ ಮೂಲಭೂತ ಸೌಕರ್ಯಗಳನ್ನು ಒದಗಿಸುವ ಪ್ರಸ್ತಾವನೆಯು ಸರ್ಕಾರದ ಮುಂದಿದೆಯೇ; ಹಾಗಿದ್ದಲ್ಲಿ, ಯಾವ ಕಾಲಮಿತಿಯಲ್ಲಿ ಇವರುಗಳಿಗೆ ಕಛೇರಿ ಮತ್ತಿತರ ಮೂಲಭೂತ ಸೌಕರ್ಯ ಒದಗಿಸಲಾಗುವುದು; | ಪ್ರತಿ ತಾಲ್ಲೂಕಿನಲ್ಲಿ ತಲಾ 5 ಗ್ರಾಮ ಲೆಕ್ಕಾಧಿಕಾರಿಗಳಿಗೆ 5 ವಾಸದ ಜೊತೆ ಕಚೇರಿ ವಸತಿ ಗೃಹಗಳನ್ನು ನಿರ್ಮಿಸುವ ಪ್ರಸ್ತಾವನೆ ಸರ್ಕಾರದ ಮುಂದಿದ್ದು, ಈ ಕಾಮಗಾರಿಗಳನ್ನು ಹಂತ ಹಂತವಾಗಿ ಕೈಗೆತ್ತಿಕೊಳ್ಳುವ ಬಗ್ಗೆ ಆರ್ಥಿಕ ಇಲಾಖೆಯ ಅಭಿಪ್ರಾಯ ಪಡೆದು ಮುಂದಿನ ಸೂಕ್ತ ಕ್ರಮ ವಹಿಸಲಾಗುವುದು. |
| ಈ) | ಇಲ್ಲದಿದ್ದಲ್ಲಿ ಕಾರಣಗಳೇನು? (ವಿವರ ನೀಡುವುದು) | |

ಕಂಇ 79 ಡಬ್ಲ್ಯೂಬಿಆರ್ 2018

(ಆರ್.ವಿ. ದೇಶಪಾಂಡೆ)
ಕಂದಾಯ ಮತ್ತು ಕೌಶಲ್ಯಾಭಿವೃದ್ಧಿ,
ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು

# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 220 |
| ಸದಸ್ಯರ ಹೆಸರು | ಶ್ರೀ ಜೆ.ಸಿ.ಮಾಧುಸ್ವಾಮಿ (ಚಿಕ್ಕನಾಯಕನಹಳ್ಳಿ) |
| ಉತ್ತರಿಸುವ ಸಚಿವರು | ಕಂದಾಯ ಸಚಿವರು |
| ಉತ್ತರಿಸುವ ದಿನಾಂಕ | 10.12.2018 |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ 1989 ರಿಂದ 1994 ರವರೆವಿಗೆ ಮಂಜೂರಾದ ಬಗರ್ ಹುಕುಂ ಜಮೀನುಗಳಿಗೆ ಇನ್ನೂ ಖಾತೆ ಪಹಣಿ ಮಾಡದೆ ಬಾಕಿ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |
| ಆ) | ಹಾಗಿದ್ದಲ್ಲಿ, ಜಮೀನು ಮಂಜೂರು ಆಗಿದ್ದರೂ ರೈತರಿಗೆ ದಾಖಲಾತಿ ಇಲ್ಲದೆ ಬೇರೆ ಅನುಕೂಲತೆಗಳನ್ನು ಪಡೆಯಲಾಗಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಬಹುತೇಕ ಪ್ರಕರಣಗಳಲ್ಲಿ ಮಂಜೂರಿದಾರರಿಗೆ ಖಾತೆ-ಪಹಣಿ ಮಾಡಲಾಗಿದ್ದು, ಕೆಲವೊಂದು ಪ್ರಕರಣಗಳಲ್ಲಿ ಸಾಗುವಳಿದಾರರು ಸಾಗುವಳಿ ಚೀಟಿ ನಕಲು, ವಂಶವೃಕ್ಷ ಇತ್ಯಾದಿ ಅಗತ್ಯ ದಾಖಲೆಗಳನ್ನು ಹಾಜರುಪಡಿಸದ ಕಾರಣ ಜಮೀನುಗಳ ಖಾತೆಯಾಗದಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಇ) | ಹಾಗಿದ್ದಲ್ಲಿ, ವ್ಯಾಜ್ಯಗಳನ್ನು ಬಗೆಹರಿಸಲು ದಾಖಲಾತಿ ಕೊರತೆಯಿಂದಾಗಿ ವ್ಯಾಜ್ಯಗಳು ಯಥೇಚ್ಛವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |
| ಈ) | ಖಾತೆ-ಪಹಣಿ ಮಾಡಲು ಆದೇಶಿಸಿ ಆದ್ಯತೆಯ ಮೇಲೆ ಕ್ರಮ ಕೈಗೊಳ್ಳಲಾಗುವುದೇ? | ಮಂಜೂರಾಗಿರುವ ಬಗರ್ ಹುಕುಂ ಜಮೀನುಗಳಿಗೆ ನಿಯಮಾನುಸಾರ ಖಾತೆ-ಪಹಣಿ ಮಾಡಲು ಆದ್ಯತೆಯ ಮೇಲೆ ಕ್ರಮ ಕೈಗೊಳ್ಳಲಾಗುವುದು. |

ಸಂಖ್ಯೆ:ಆರ್‌ಡಿ 367 ಟಿಆರ್‌ಎಂ 2018

(ಆರ್.ವಿ.ದೇಶಪಾಂಡೆ)
ಕಂದಾಯ ಹಾಗೂ ಕೌಶಲ್ಯ ಅಭಿವೃದ್ಧಿ,
ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು.

ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 392
ಸದಸ್ಯರ ಹೆಸರು : ಶ್ರೀ ಎಂ. ಶ್ರೀನಿವಾಸ್ (ಮಂಡ್ಯ)
ಉತ್ತರಿಸುವ ಸಚಿವರು : ಕಂದಾಯ ಸಚಿವರು
ಉತ್ತರಿಸುವ ದಿನಾಂಕ : 10.12.2018

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಮಂಡ್ಯದಲ್ಲಿ ಅಮೃತ ಮಹೋತ್ಸವ ಕಟ್ಟಡ ನಿರ್ಮಾಣ ಮಾಡಲಾಗುವುದೆಂದು ಘೋಷಣೆಯಾಗಿದ್ದು, ಪ್ರಸ್ತುತ ನನೆಗುದಿಗೆ ಬಿದ್ದಿರಲು ಕಾರಣವೇನು; | ಸರ್ಕಾರಿ ಆದೇಶ ಸಂ: ಕಂಇ 54 ಡಬ್ಲ್ಯೂಬಿಆರ್ 2015, ದಿ: 17.05.2016 ರನ್ವಯ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್ ಅಮೃತ ಭವನವನ್ನು ಜಿಲ್ಲಾಧಿಕಾರಿಗಳ ಕಚೇರಿ ಹತ್ತಿರದಲ್ಲಿರುವ ಹಳೆಯ ತಾಲ್ಲೂಕು ಕಚೇರಿ ಆವರಣದಲ್ಲಿ ರೂ.4.00 ಕೋಟಿಗಳಿಗೆ ಸೀಮಿತಗೊಳಿಸಿದ ವೆಚ್ಚದಲ್ಲಿ ನಿರ್ಮಿಸಲು ಸವಿವರ ಅಂದಾಜುಪಟ್ಟಿ ಮತ್ತು ನಕ್ಷೆಯನ್ನು ಸರ್ಕಾರಕ್ಕೆ ಸಲ್ಲಿಸಿ, ಆಡಳಿತಾತ್ಮಕ ಅನುಮೋದನೆ ಪಡೆಯುವ ಷರತ್ತಿಗೊಳಪಟ್ಟು ತಾತ್ವಿಕ ಅನುಮೋದನೆ ನೀಡಿ ಆದೇಶಿಸಲಾಗಿರುತ್ತದೆ.<br><br>ಆದರೆ, ಈವರೆಗೆ ಜಿಲ್ಲಾಧಿಕಾರಿಗಳಿಂದ ಸವಿವರ ಅಂದಾಜುಪಟ್ಟಿ ಮತ್ತು ನಕ್ಷೆಯೊಂದಿಗಿನ ಪ್ರಸ್ತಾವನೆ ಸರ್ಕಾರದಲ್ಲಿ ಸ್ವೀಕೃತವಾಗಿರುವುದಿಲ್ಲ. ಆದ್ದರಿಂದ, ಈಗಾಗಲೇ ತಾತ್ವಿಕ ಅನುಮೋದನೆ ನೀಡಿರುವಂತೆ ಸೂಕ್ತ ಅಂದಾಜುಪಟ್ಟಿ ಮತ್ತು ನಕ್ಷೆಯೊಂದಿಗೆ ಕೂಡಲೇ ಪ್ರಸ್ತಾವನೆ ಸಲ್ಲಿಸುವಂತೆ ಜಿಲ್ಲಾಧಿಕಾರಿ, ಮಂಡ್ಯ ಜಿಲ್ಲೆ ಇವರಿಗೆ ಸೂಚಿಸಲಾಗಿದೆ. |
| ಆ) | ಪ್ರಸ್ತುತ ಈ ಘೋಷಣೆ ಯಾವ ಹಂತದಲ್ಲಿದೆ; ಈ ಬಗ್ಗೆ ಸರ್ಕಾರ ಕೈಗೊಳ್ಳಲಿರುವ ಕ್ರಮವೇನು? | |

ಕಂಇ 83 ಡಬ್ಲ್ಯೂಬಿಆರ್ 2018

(ಆರ್.ವಿ. ದೇಶಪಾಂಡೆ)
ಕಂದಾಯ ಮತ್ತು ಕೌಶಲ್ಯಾಭಿವೃದ್ಧಿ,
ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು

**ಕರ್ನಾಟಕ ವಿಧಾನಸಭೆ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 412

ಸದಸ್ಯರ ಹೆಸರು : ಶ್ರೀ ಐಹೋಳೆ ಡಿ. ಮಹಾಲಿಂಗಪ್ಪ (ರಾಯಭಾಗ)

ಉತ್ತರಿಸುವ ದಿನಾಂಕ : 10.12.2018

ಉತ್ತರಿಸುವ ಸಚಿವರು : ಕಂದಾಯ ಹಾಗೂ ಕೌಶಲ್ಯ ಅಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು.

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿನ ಅರ್ಧದಷ್ಟು ಗ್ರಾಮ ಲೆಕ್ಕಿಗರನ್ನು ಕಂದಾಯ ಇಲಾಖೆಯ ಕಛೇರಿಗಳಲ್ಲಿ ಗುಮಾಸ್ತರ ಹುದ್ದೆಗೆ ನಿಯೋಜಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಸಾರ್ವಜನಿಕರಿಗೆ ಶೀಘ್ರವಾಗಿ ಇವರ ಸೇವೆ ಸಿಗದೆ ತೊಂದರೆ ಅನುಭವಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. ಪ್ರಥಮ ದರ್ಜೆ ಸಹಾಯಕ ಮತ್ತು ದ್ವಿತೀಯ ದರ್ಜೆ ಸಹಾಯಕ ಸಿಬ್ಬಂದಿಗಳ ಕೊರತೆ ಇರುವುದರಿಂದ ಸಾರ್ವಜನಿಕ ಮತ್ತು ಆಡಳಿತಾತ್ಮಕ ಹಿತದೃಷ್ಟಿಯಿಂದ ಗ್ರಾಮ ಲೆಕ್ಕಿಗರನ್ನು ಕಛೇರಿ ಕೆಲಸಗಳಿಗೆ ನಿಯೋಜಿಸಲಾಗಿದೆ. ಗ್ರಾಮ ಲೆಕ್ಕಿಗರ ನಿಯೋಜನೆಯಿಂದ ತೆರವಾದ ಹುದ್ದೆಯಲ್ಲಿ ಇತರೆ ಗ್ರಾಮ ಲೆಕ್ಕಿಗರನ್ನು ಅಧಿಕ ಪ್ರಭಾರದಲ್ಲಿರಿಸಿ ಸಾರ್ವಜನಿಕರಿಗೆ ತೊಂದರೆಯಾಗದಂತೆ ಕ್ರಮ ವಹಿಸಲಾಗಿದೆ. |
| ಆ | ಈ ಗ್ರಾಮ ಲೆಕ್ಕಿಗರನ್ನು ಅವರ ಮೂಲ ಹುದ್ದೆಗೆ ತಕ್ಕಂತೆ ಪುನಃ ಗ್ರಾಮ ಲೆಕ್ಕಾಧಿಕಾರಿಗಳಾಗಿ ನಿಯೋಜಿಸಲು ಸರ್ಕಾರ ಕ್ರಮ ಕೈಗೊಳ್ಳುವುದೇ; | ಹೌದು. |
| ಇ | ಯಾವ ಕಾಲಮಿತಿಯಲ್ಲಿ ಇವರುಗಳನ್ನು ಕಛೇರಿ ಕರ್ತವ್ಯದಿಂದ ಬಿಡುಗಡೆಗೊಳಿಸಿ ಗ್ರಾಮ ಲೆಕ್ಕಾಧಿಕಾರಿಗಳಾಗಿ ನಿಯೋಜಿಸಲಾಗುವುದು; | ಕಂದಾಯ ಇಲಾಖೆಯಲ್ಲಿ ಖಾಲಿ ಇರುವ ಪ್ರಥಮ ದರ್ಜೆ ಸಹಾಯಕ ಮತ್ತು ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳನ್ನು ಭರ್ತಿ ಮಾಡಲು ಕರ್ನಾಟಕ ಲೋಕಸೇವಾ ಆಯೋಗವು ಅಂತಿಮ ಆಯ್ಕೆ ಪಟ್ಟಿಯನ್ನು ಪ್ರಕಟಿಸಿದ್ದು, ಆಯ್ಕೆಗೊಂಡ ಅಭ್ಯರ್ಥಿಗಳು ಕರ್ತವ್ಯಕ್ಕೆ ನೇಮಕಗೊಂಡ ಕೂಡಲೇ ಗ್ರಾಮ ಲೆಕ್ಕಿಗರನ್ನು ಕಛೇರಿ ಕರ್ತವ್ಯದಿಂದ ಬಿಡುಗಡೆಗೊಳಿಸಲಾಗುವುದು. |
| ಈ | ಬೆಳಗಾವಿ ಜಿಲ್ಲೆ ರಾಯಭಾಗ ತಾಲ್ಲೂಕಿನ ತಾಲ್ಲೂಕು ಕಛೇರಿಯಲ್ಲಿ ತಹಶೀಲ್ದಾರ್ ಹಂತದಿಂದ ಜವಾನನ ಹಂತದವರೆಗಿನ ಹುದ್ದೆಗಳು ಖಾಲಿ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಖಾಲಿ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ವಿವರ ನೀಡುವುದು) | ಹೌದು. 41 ಗ್ರಾಮಲೆಕ್ಕಿಗರ ಹುದ್ದೆಗಳನ್ನು ಭರ್ತಿ ಮಾಡಲು ಜಿಲ್ಲಾಧಿಕಾರಿಯವರು ಅಧಿಸೂಚನೆ ಹೊರಡಿಸಿರುತ್ತಾರೆ. ಪ್ರಥಮ ದರ್ಜೆ ಸಹಾಯಕ ಮತ್ತು ದ್ವಿತೀಯ ದರ್ಜೆ ಸಹಾಯಕರ ನೇರ ನೇಮಕಾತಿ ಹುದ್ದೆಗಳ ಆಯ್ಕೆ ಪಟ್ಟಿಯು ಕರ್ನಾಟಕ ಲೋಕಸೇವಾ ಆಯೋಗದಿಂದ ಸ್ವೀಕೃತಗೊಂಡ ಕೂಡಲೇ ಭರ್ತಿ ಮಾಡಲಾಗುವುದು.<br>ಸರ್ಕಾರದ ಸುತ್ತೋಲೆ ಸಂಖ್ಯೆ:ಸಿಆಸುಇ 380 ಸೇನೆನಿ 2018 (ಭಾಗ-1), ದಿನಾಂಕ:03.08.2018 ರಲ್ಲಿ ಮುಂಬಡ್ತಿ/ಹಿಂಬಡ್ತಿ ಪ್ರಕ್ರಿಯೆ ಜರುಗಿಸದೇ ಯಥಾಸ್ಥಿತಿ ಕಾಪಾಡುವಂತೆ ಸೂಚಿಸಿರುವುದರಿಂದ ಖಾಲಿ ಇರುವ ಮುಂಬಡ್ತಿ ಹುದ್ದೆಗಳನ್ನು ಭರ್ತಿ ಮಾಡಿರುವುದಿಲ್ಲ. |
| ಉ | ಯಾವ ಕಾಲಮಿತಿಯಲ್ಲಿ ಈ ಹುದ್ದೆಗಳನ್ನು ಭರ್ತಿ ಮಾಡಿ ಸಾರ್ವಜನಿಕರಿಗೆ ಅನುಕೂಲ ಕಲ್ಪಿಸಿಕೊಡಲಾಗುವುದು; ಇಲ್ಲದಿದ್ದಲ್ಲಿ ಕಾರಣಗಳೇನು? (ವಿವರ ನೀಡುವುದು) | |

ಸಂಖ್ಯೆ: ಕಂಇ 341 ಬಿಎಸ್‌ಸಿ 2018

(ಆರ್.ವಿ. ದೇಶಪಾಂಡೆ)
ಕಂದಾಯ ಹಾಗೂ ಕೌಶಲ್ಯ ಅಭಿವೃದ್ಧಿ,
ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು.

# <u>ಕರ್ನಾಟಕ ವಿಧಾನ ಸಭೆ</u>

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 477 |
| ಉತ್ತರಿಸುವ ದಿನಾಂಕ | 10-12-2018 |
| ಮಾನ್ಯ ಸದಸ್ಯರ ಹೆಸರು | ಶ್ರೀ ಅಭಯ್ ಪಾಟೀಲ್ (ಬೆಳಗಾಂ ದಕ್ಷಿಣ ಕ್ಷೇತ್ರ) |
| ಉತ್ತರಿಸುವ ಸಚಿವರು | ಕಂದಾಯ ಮತ್ತು ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಹಾಗೂ ಜೀವನೋಪಾಯ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಬೆಳಗಾವಿ ನಗರದಲ್ಲಿರುವ ಉಪ ನೋಂದಣಾಧಿಕಾರಿಗಳ ಕಛೇರಿಯು ಅತೀ ಚಿಕ್ಕದಾಗಿರುವುದರಿಂದ, ಸಾರ್ವಜನಿಕರಿಗೆ ಖರೀದಿ/ವಿಕ್ರಿ ಮಾಡಿ ಕೊಳ್ಳಲು ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: ಬಂದಿದ್ದಲ್ಲಿ, ಈ ಬಗ್ಗೆ ಯಾವ ಕ್ರಮವನ್ನು ಕೈಗೊಳ್ಳುವ ಉದ್ದೇಶವನ್ನು ಹೊಂದಿದೆ. | ಸರ್ಕಾರದ ಗಮನಕ್ಕೆ ಬಂದಿದೆ.<br>ಶ್ರೀ ಅಭಯ್ ಪಾಟೀಲ್, ಮಾನ್ಯ ಶಾಸಕರು, ಬೆಳಗಾವಿ ದಕ್ಷಿಣ ಇವರು ದಿನಾಂಕ: 15-11-2018ರಂದು ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಕೇಂದ್ರ ಕಛೇರಿಗೆ ಪತ್ರ ಬರೆದು ಬೆಳಗಾವಿ ನಗರಕ್ಕೆ ಮತ್ತೊಂದು ಉಪ ನೋಂದಣಿ ಕಛೇರಿಯನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ. ಅದರಂತೆ, ದಿನಾಂಕ: 06-12-2018 ರ ಪತ್ರದಲ್ಲಿ ಜಿಲ್ಲಾ ನೋಂದಣಾಧಿಕಾರಿ, ಬೆಳಗಾವಿ ಇವರಿಗೆ ಈ ಸಂಬಂಧ ವರದಿ ನೀಡುವಂತೆ ಸೂಚನೆ ನೀಡಲಾಗಿದೆ. ಜಿಲ್ಲಾ ನೋಂದಣಾಧಿಕಾರಿಗಳು, ಬೆಳಗಾವಿ ಇವರಿಂದ ವರದಿ ಸ್ವೀಕೃತವಾದ ಕೂಡಲೇ ಈ ಬಗ್ಗೆ ಪರಿಶೀಲಿಸಿ ಕ್ರಮ ಕೈಗೊಳ್ಳಲಾಗುವುದು. |
| ಆ | ಬೆಳಗಾವಿ ನಗರದಲ್ಲಿ ಮತ್ತೊಂದು ಉಪ ನೋಂದಣಾಧಿಕಾರಿಗಳ ಕಛೇರಿಯನ್ನು ಆರಂಭಿಸುವ ಉದ್ದೇಶವು ಸರ್ಕಾರಕ್ಕೆ ಇದೆಯೇ ಇದ್ದಲ್ಲಿ, ಯಾವಾಗ ಯಾವ ಪ್ರದೇಶದಲ್ಲಿ ಪ್ರಾರಂಭಿಸಲಾಗುವುದು; | |
| ಇ | ಈ ಬಗ್ಗೆ ಯಾರಾದರೂ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿದ್ದಾರೆಯೇ; ಸಲ್ಲಿಸಿದ್ದಲ್ಲಿ, ಯಾರು, ಯಾವಾಗ ಸಲ್ಲಿಸಿದ್ದಾರೆ (ವಿವರ ಒದಗಿಸುವುದು)? | |

ಸಂಖ್ಯೆ: ಕಂಇ 194 ಮುನೋಸ 2018

(ಆರ್.ವಿ.ದೇಶಪಾಂಡೆ)
ಕಂದಾಯ ಮತ್ತು ಕೌಶಲ್ಯಾಭಿವೃದ್ಧಿ,
ಉದ್ಯಮಶೀಲತೆ ಹಾಗೂ ಜೀವನೋಪಾಯ ಸಚಿವರು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 250
ಸದಸ್ಯರ ಹೆಸರು : ಶ್ರೀ ಯಶವಂತರಾಯಗೌಡ ವಿಠ್ಠಲಗೌಡ ಪಾಟೀಲ್ (ಇಂಡಿ)
ಉತ್ತರಿಸುವ ಸಚಿವರು : ಕಂದಾಯ ಸಚಿವರು
ಉತ್ತರಿಸುವ ದಿನಾಂಕ : 10.12.2018

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಇಂಡಿ ಪಟ್ಟಣದಲ್ಲಿ ರೂ.10.00 ಕೋಟಿ ವೆಚ್ಚದಲ್ಲಿ ನಿರ್ಮಿಸಿರುವ ಮಿನಿ ವಿಧಾನಸೌಧದ ಕಟ್ಟಡದ ನಿರ್ವಹಣೆಯನ್ನು ಮಾಡಲು ಸೂಕ್ತ ಸಿಬ್ಬಂದಿ ಇಲ್ಲದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | 3 ಮಹಡಿಗಳ ಕಟ್ಟಡವನ್ನು ಮೆಟ್ಟಿಲುಗಳ ಮೂಲಕ ಪ್ರವೇಶಿಸಲು ಅಂಗವಿಕಲರು, ವೃದ್ಧರು, ನಿಶಕ್ತರು ತೀವ್ರ ಕಷ್ಟಕರ ಪರಿಸ್ಥಿತಿಯನ್ನು ಎದುರಿಸುತ್ತಿದ್ದು, ಇಲ್ಲಿ ಲಿಫ್ಟ್ ಯಂತ್ರ ಅಳವಡಿಸದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಇಂಡಿ ಮಿನಿ ವಿಧಾನಸೌಧದ ನೆಲಮಹಡಿಯ ತಹಶೀಲ್ದಾರ್ ಕಾರ್ಯಾಲಯ ಹಾಗೂ 1ನೇ ಮಹಡಿಯ ಉಪ ವಿಭಾಗಾಧಿಕಾರಿಗಳ ಕಾರ್ಯಾಲಯಕ್ಕೆ ಪೀಠೋಪಕರಣ ಮತ್ತು ಲಿಫ್ಟ್ ಅಳವಡಿಸುವ ಸಲುವಾಗಿ ನಿರ್ಮಿತಿ ಕೇಂದ್ರದ ವತಿಯಿಂದ ತಯಾರಿಸಲ್ಪಟ್ಟ ರೂ.56.26 ಲಕ್ಷಗಳ ಅಂದಾಜು ಪಟ್ಟಿಯು ಜಿಲ್ಲಾಧಿಕಾರಿ, ವಿಜಯಪುರ ಇವರಿಂದ ಸರ್ಕಾರದಲ್ಲಿ ಸ್ವೀಕೃತವಾಗಿದ್ದು, ಪರಿಶೀಲನೆಯಲ್ಲಿರುತ್ತದೆ. |
| ಇ) | ಉಪವಿಭಾಗಾಧಿಕಾರಿಗಳ, ತಹಶೀಲ್ದಾರ್ ಕಛೇರಿ ಸೇರಿದಂತೆ ಇನ್ನೂ ಮುಂತಾದ ಕಛೇರಿಗಳಿಗೆ ಹೊಸದಾಗಿ ಪೀಠೋಪಕರಣಗಳೊಂದಿಗೆ ಲಿಫ್ಟ್ ಯಂತ್ರ ಅಳವಡಿಸುವ ಪ್ರಸ್ತಾವನೆಯು ಸರ್ಕಾರಕ್ಕೆ ಬಂದಿರುವುದು ನಿಜವೇ; ಈ ಬಗ್ಗೆ ಸರ್ಕಾರ ಆಸಕ್ತಿ ಹೊಂದಿದೆಯೆ; | |
| ಈ) | ಹಾಗಿದ್ದಲ್ಲಿ, ಲಿಫ್ಟ್ ಯಂತ್ರ ಅಳವಡಿಸಲು ಹಾಗೂ ಹೊಸದಾಗಿ ಪೀಠೋಪಕರಣ ಒದಗಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು (ವಿವರ ನೀಡುವುದು); | |
| ಉ) | ಸದರಿ ಕಟ್ಟಡದ ನಿರ್ವಹಣೆಗೆ ಸೂಕ್ತ ಸಿಬ್ಬಂದಿ ಹಾಗೂ ಅನುದಾನವನ್ನು ಒದಗಿಸುವ ಕುರಿತು ಸರ್ಕಾರ ಕೈಗೊಂಡಿರುವ ಕ್ರಮಗಳೇನು? | ಇಂಡಿ ಪಟ್ಟಣದಲ್ಲಿ ಹೊಸದಾಗಿ ಮಿನಿ ವಿಧಾನಸೌಧ ಕಟ್ಟಡ ನಿರ್ಮಾಣವಾಗಿದ್ದು, ತಹಶೀಲ್ದಾರ್ ಕಛೇರಿಯಲ್ಲಿ 07 ಡಿ ಗ್ರೂಪ್ ಸಿಬ್ಬಂದಿಗಳು ಮಾತ್ರ ಇರುತ್ತಾರೆ. ಇಡೀ ಕಟ್ಟಡ ಮತ್ತು ಗಾರ್ಡನ್ ನಿರ್ವಹಣೆ ಇವರಿಂದ ಸಾಧ್ಯವಾಗದಿರುವುದು ಗಮನಕ್ಕೆ ಬಂದಿರುತ್ತದೆ.<br><br>ಸಂಬಂಧಪಟ್ಟ ಜಿಲ್ಲಾಧಿಕಾರಿಗಳು, ಸದರಿ ಕಟ್ಟಡ ನಿರ್ವಹಣೆಗೆ ತಾತ್ಕಾಲಿಕ ಕ್ರಮ ಕೈಗೊಂಡಿದ್ದು, ಅವಶ್ಯವಿರುವ ಕಡೆ ಸೂಕ್ತ ಸಿಬ್ಬಂದಿ ಮತ್ತು ಅನುದಾನ ಬಿಡುಗಡೆಗೆ ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಂದ ಸೂಕ್ತ ಪ್ರಸ್ತಾವನೆ ಪಡೆದು ಕ್ರಮವಹಿಸಲಾಗುವುದು. |

ಕಂಇ 80 ಡಬ್ಲ್ಯೂಬಿಆರ್ 2018

(ಆರ್.ವಿ. ದೇಶಪಾಂಡೆ)
ಕಂದಾಯ ಮತ್ತು ಕೌಶಲ್ಯಾಭಿವೃದ್ಧಿ,
ಉದ್ಯಮಶೀಲತೆ ಮತು ಜೀವನೋಪಾಯ ಸಚಿವರು

# ಕರ್ನಾಟಕ ವಿಧಾನಸಭೆ

| | | |
|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 406 |
| 2 | ಸದಸ್ಯರ ಹೆಸರು | ಶ್ರೀಮಂತ್ ಬಾಳಾಸಾಹೇಬ್ ಪಾಟೀಲ್ (ಕಾಗವಾಡ) |
| 3 | ವಿಷಯ | ಹೊಸ ತಾಲ್ಲೂಕುಗಳು |
| 4 | ಉತ್ತರಿಸಬೇಕಾದ ದಿನಾಂಕ | 10.12.2018 |
| 5 | ಉತ್ತರಿಸುವ ಸಚಿವರು | ಕಂದಾಯ ಹಾಗೂ ಕೌಶಲ್ಯಾಭಿವೃದ್ಧಿ ಉದ್ಯಮ ಶೀಲತೆ ಮತ್ತು ಜೀವನೋಪಾಯ ಸಚಿವರು ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಇತ್ತೀಚೆಗೆ ಘೋಷಿಸಲ್ಪಟ್ಟ ಹೊಸ ತಾಲ್ಲೂಕು ಕೇಂದ್ರಗಳು ಎಷ್ಟು; ಅವು ಯಾವುವು (ಮಾಹಿತಿ ಒದಗಿಸುವುದು) | 2017-18ನೇ ಸಾಲಿನ ಆಯವ್ಯಯದಲ್ಲಿ ಘೋಷಿಸಲಾದಂತೆ 50 ಹೊಸ ತಾಲ್ಲೂಕುಗಳನ್ನು ರಚಿಸಲಾಗಿದೆ.<br><br>(ವಿವರಗಳನ್ನು ಅನುಬಂಧದಲ್ಲಿ ನೀಡಿದೆ) |
| ಆ) | ಬೆಳಗಾವಿ ಜಿಲ್ಲೆ ಅಥಣಿ ತಾಲ್ಲೂಕಿನ ಕಾಗವಾಡ ವನ್ನು ಹೊಸ ತಾಲ್ಲೂಕು ಕೇಂದ್ರವನ್ನಾಗಿ ಘೋಷಿಸ ಲಾಗಿದೆಯೇ; | ಹೌದು |
| ಇ) | ಹಾಗಿದ್ದಲ್ಲಿ ಹೊಸ ತಾಲ್ಲೂಕು ಕೇಂದ್ರವನ್ನು ಕಾರ್ಯರೂಪಕ್ಕೆ ತರಲು ಸರ್ಕಾರ ಯಾವ ಯಾವ ಕ್ರಮಗಳನ್ನು ಕೈಗೊಂಡಿದೆ(ಮಾಹಿತಿ ಒದಗಿಸುವುದು) | ಕಾಗವಾಡ ತಾಲ್ಲೂಕಿನಲ್ಲಿ ಕಂದಾಯ ಇಲಾಖಾ ವತಿಯಿಂದ ತಾಲ್ಲೂಕು ಕಛೇರಿಯನ್ನು ಪ್ರಾರಂಭ ಮಾಡಲಾಗಿದೆ ಮತ್ತು ಇತರೆ ಇಲಾಖೆಗಳು ತಾಲ್ಲೂಕು ಮಟ್ಟದ ಕಛೇರಿಗಳನ್ನು ಆರ್ಥಿಕ ಇಲಾಖೆಯ ಸಹಮತಿಯೊಂದಿಗೆ ಹಂತ ಹಂತವಾಗಿ ತೆರೆಯಲು ಅನುಮತಿ ನೀಡಲಾಗಿದೆ.<br><br>ಸರ್ಕಾರದ ಆದೇಶ ಸಂಖ್ಯೆ: ಕಂಇ 35 ಭೂದಾಪು 2017 ದಿನಾಂಕ: 17.01.2018ರ ಆದೇಶದಲ್ಲಿ ಕಾಗವಾಡ ತಾಲ್ಲೂಕು ಕಛೇರಿಗೆ ಅಗತ್ಯವಾದ ಹುದ್ದೆಗಳನ್ನು ಸೃಜಿಸಲಾಗಿದೆ.<br><br>ಸರ್ಕಾರದ ಆದೇಶ ಸಂಖ್ಯೆ: ಕಂಇ 167 ಭೂದಾಪು 2017 ದಿನಾಂಕ: 28.12.2017 ಮತ್ತು 07.03.2018 ಹಾಗೂ ಕಂಇ 73 ಭೂದಾಪು 2018 ದಿನಾಂಕ: 23.08.2018 ರ ಅನ್ವಯ ಹೊಸದಾಗಿ ರಚನೆಯಾದ ತಾಲ್ಲೂಕುಗಳ ಕಾರ್ಯಾರಂಭ ಮತ್ತು ಆಡಳಿತಾತ್ಮಕ ಪ್ರಕ್ರಿಯೆಯನ್ನು ಪ್ರಾರಂಭಿಸಲು ಹಾಗೂ ಮೂಲಭೂತ ಸೌಲಭ್ಯಗಳನ್ನು ಕಲ್ಪಿಸಲು ಪ್ರತಿ ತಾಲ್ಲೂಕಿಗೆ ಈವರೆಗೂ ಒಟ್ಟು ರೂ.15.00 ಲಕ್ಷ ಅನುದಾನವನ್ನು ಸಂಬಂಧಿಸಿದ ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲಾಗಿರುತ್ತದೆ.<br><br>ಮಿನಿ ವಿಧಾನಸೌಧ ಕಟ್ಟಡವನ್ನು ನಿರ್ಮಿಸುವ ಸಂಬಂಧ ಜಿಲ್ಲಾಧಿಕಾರಿಗಳಿಂದ ಸ್ಥಳವನ್ನು ಗುರುತಿಸಿ ಪ್ರಸ್ತಾವನೆಯನ್ನು ಪಡೆದು ನಂತರ ಪರಿಶೀಲಿಸಿ ಕ್ರಮ ಜರುಗಿಸಲಾಗುವುದು. |

ಕಂಇ 110 ಭೂದಾಪು 2018

(ಆರ್.ವಿ. ದೇಶಪಾಂಡೆ)
ಕಂದಾಯ ಹಾಗೂ ಕೌಶಲ್ಯಾಭಿವೃದ್ಧಿ
ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು

ಅನುಬಂಧ

| ಕ್ರಮ ಸಂಖ್ಯೆ | ಜಿಲ್ಲೆಗಳು | ಹೊಸ ತಾಲ್ಲೂಕುಗಳು |
|---|---|---|
| 1 | ಬಾಗಲಕೋಟೆ | 1 ಗುಳೇದಗುಡ್ಡ<br>2 ರಬಕವಿ -ಬನಹಟ್ಟಿ<br>3 ಇಳಕಲ್ |
| 2 | ಬೆಳಗಾವಿ | 4 ನಿಪ್ಪಾಣಿ<br>5 ಕಾಗವಾಡ<br>6 ಮೂಡಲಗಿ |
| 3 | ಚಾಮರಾಜನಗರ | 7 ಹನೂರು |
| 4 | ದಾವಣಗೆರೆ | 8 ನ್ಯಾಮತಿ |
| 5 | ಬೀದರ್ | 9 ಚಿಟಗುಪ್ಪ<br>10. ಹುಲಸೂರು<br>11 ಕಮಲಾನಗರ |
| 6 | ಬಳ್ಳಾರಿ | 12 ಕುರುಗೋಡು<br>13 ಕೊಟ್ಟೂರು<br>14 ಕಂಪ್ಲಿ |
| 7 | ಧಾರವಾಡ | 15 ಅಣ್ಣಿಗೇರಿ<br>16 ಅಳ್ನಾವರ<br>17. ಹುಬ್ಬಳ್ಳಿ ನಗರ |
| 8 | ಗದಗ್ | 18 ಗಜೇಂದ್ರಗಡ<br>19 ಲಕ್ಷ್ಮೇಶ್ವರ |
| 9 | ಕಲಬುರಗಿ | 20 ಕಾಳಗಿ<br>21 ಕಮಲಾಪೂರ<br>22 ಯಡ್ರಾಮಿ<br>23. ಶಹಾಬಾದ್ |
| 10 | ಯಾದಗಿರಿ | 24 ಹುಣಸಗಿ<br>25 ವಡಗೇರಾ<br>26. ಗುರುಮಿಟ್ಕಲ್ |
| 11 | ಕೊಪ್ಪಳ | 27. ಕುಕನೂರು<br>28 ಕನಕಗಿರಿ<br>29. ಕಾರಟಗಿ |
| 12 | ರಾಯಚೂರು | 30 ಮಸ್ಕಿ<br>31. ಸಿರವಾರ |
| 13 | ಉಡುಪಿ | 32. ಬ್ರಹ್ಮಾವರ<br>33. ಕಾಪು<br>34 ಬೈಂದೂರು<br>35 ಹೆಬ್ರಿ |
| 14 | ದಕ್ಷಿಣ ಕನ್ನಡ | 36. ಮೂಡುಬಿದರೆ |

| | | |
|---|---|---|
| | | ೩೭ ಕಡಬ |
| ೧೫ | ಬೆಂಗಳೂರು ನಗರ | ೩೮ ಯಲಹಂಕ |
| ೧೬ | ವಿಜಯಪುರ | ೩೯ ಬಬಲೇಶ್ವರ<br>೪೦ ನಿಡಗುಂದಿ<br>೪೧ ತಿಕೋಟ<br>೪೨ ದೇವರ ಹಿಪ್ಪರಗಿ<br>೪೩ ತಾಳಿಕೋಟ<br>೪೪ ಚಡಚಣ<br>೪೫ ಕೊಲ್ಹಾರ |
| ೧೭ | ಹಾವೇರಿ | ೪೬ ರಟ್ಟಿಹಳ್ಳಿ |
| ೧೮ | ಮೈಸೂರು | ೪೭ ಸರಗೂರು |
| ೧೯ | ಚಿಕ್ಕಮಗಳೂರು | ೪೮ ಅಜ್ಜಂಪುರ |
| ೨೦ | ಉತ್ತರ ಕನ್ನಡ | ೪೯ ದಾಂಡೇಲಿ |
| ೨೧ | ಕೋಲಾರ | ೫೦ ಕೆ.ಜಿ.ಎಫ್ |

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 614 |
| ಉತ್ತರಿಸುವ ದಿನಾಂಕ | 10–12–2018 |
| ಮಾನ್ಯ ಸದಸ್ಯರ ಹೆಸರು | ಶ್ರೀ ಪರಣ್ಣ ಈಶ್ವರಪ್ಪ ಮುನವಳ್ಳಿ (ಗಂಗಾವತಿ ಕ್ಷೇತ್ರ) |
| ಉತ್ತರಿಸುವ ಸಚಿವರು | ಕಂದಾಯ ಮತ್ತು ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಹಾಗೂ ಜೀವನೋಪಾಯ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ರೈತರ ಜಮೀನನ್ನು ನೋಂದಣಿ ಮತ್ತು ದುರಸ್ತು ಮಾಡಿಸುವ ಸಂದರ್ಭದಲ್ಲಿ ಸರ್ವೆ ಸ್ಕೆಚ್ ಕಡ್ಡಾಯವಾಗಿರುವುದರಿಂದ, ರೈತರಿಗಾಗುತ್ತಿರುವ ತೊಂದರೆ ಸರ್ಕಾರದ ಗಮನಕ್ಕೆ ಬಂದಿದೆಯೇ; | ಕೃಷಿ ಜಮೀನುಗಳ ಪೈಕಿ, ಕೃಷಿ ಜಮೀನಿನ ಒಂದು ಸರ್ವೇ ನಂಬರಿನ ಭಾಗಶಃ ಜಮೀನನ್ನು ಮಾರಾಟ ಮಾಡುವ ಸಂದರ್ಭದಲ್ಲಿ ಸರ್ಕಾರದ ಸುತ್ತೋಲೆ ಸಂಖ್ಯೆ: ಕಂಇ 344 ಮುನೋಮು 2008, ದಿನಾಂಕ:06–04–2009 ರನ್ವಯ 11ಇ ಸ್ಕೆಚ್‌ನ್ನು ಹಾಜರುಪಡಿಸುವುದು ಕಡ್ಡಾಯವಾಗಿರುತ್ತದೆ. ಇದರಿಂದ ರೈತರಿಗೆ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. |
| ಆ | ಹಾಗಿದ್ದಲ್ಲಿ, ನೋಂದಣಿ ಮತ್ತು ದುರಸ್ತು ವಿಳಂಬ ತಪ್ಪಿಸಲು ಯಾವ ಕ್ರಮಕೈಗೊಳ್ಳಲಾಗುವುದು? | ಅನ್ವಯಿಸುವುದಿಲ್ಲ. |

ಸಂಖ್ಯೆ: ಕಂಇ 195 ಮುನೋಸ 2018

(ಆರ್.ವಿ.ದೇಶಪಾಂಡೆ)
ಕಂದಾಯ ಮತ್ತು ಕೌಶಲ್ಯಾಭಿವೃದ್ಧಿ,
ಉದ್ಯಮಶೀಲತೆ ಹಾಗೂ ಜೀವನೋಪಾಯ ಸಚಿವರು

# ಕರ್ನಾಟಕ ವಿಧಾನಸಭೆ

| | | |
|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 624 |
| 2 | ಸದಸ್ಯರ ಹೆಸರು | ಶ್ರೀ ವಿಶ್ವನಾಥ್ ಚಂದ್ರಶೇಖರ್ ಮಾಮನಿ (ಸವದತ್ತಿ ಯಲ್ಲಮ್ಮ) |
| 3 | ವಿಷಯ | ಯರಗಟ್ಟಿ ತಾಲ್ಲೂಕು ರಚನೆ |
| 4 | ಉತ್ತರಿಸಬೇಕಾದ ದಿನಾಂಕ | 10.12.2018 |
| 5 | ಉತ್ತರಿಸುವ ಸಚಿವರು | ಕಂದಾಯ ಹಾಗೂ ಕೌಶಲ್ಯಾಭಿವೃದ್ಧಿ ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಸವದತ್ತಿ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಯರಗಟ್ಟಿಯನ್ನು ತಾಲ್ಲೂಕನ್ನಾಗಿ ರಚನೆ ಮಾಡಬೇಕೆಂಬುದು ಆ ಭಾಗದ ಜನರ ಬೇಡಿಕೆಯಾಗಿದ್ದು, ಈ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಯರಗಟ್ಟಿ ಪಟ್ಟಣವನ್ನು ತಾಲ್ಲೂಕು ಕೇಂದ್ರವನ್ನಾಗಿ ಮಾಡುವ ಯಾವುದೇ ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ.<br><br>ಯರಗಟ್ಟಿ ಪಟ್ಟಣವನ್ನು ತಾಲ್ಲೂಕು ಕೇಂದ್ರವನ್ನಾಗಿ ಮಾಡುವಂತೆ ಕೋರಿಕೆಯು ಸ್ವೀಕೃತವಾಗಿರುತ್ತದೆ. ಆದರೆ ಯಾವುದೇ ಒಂದು ಹೋಬಳಿ/ಪ್ರದೇಶವನ್ನು ತಾಲ್ಲೂಕನ್ನಾಗಿ ರಚಿಸಬೇಕಾದರೆ ಭೌಗೋಳಿಕ ಮತ್ತು ಆಡಳಿತಾತ್ಮಕ ಹಾಗೂ ಹಣಕಾಸಿನ ಪರಿಸ್ಥಿತಿಯನ್ನು ಅವಲಂಬಿಸಬೇಕಾಗಿರುತ್ತದೆ. ಅದರಂತೆ ಹೊಸ ತಾಲ್ಲೂಕುಗಳನ್ನು ರಚಿಸುವ ಪ್ರಸ್ತಾವನೆಗಳು ಸಂಪನ್ಮೂಲಗಳ ಕ್ರೋಢೀಕರಣ ಹಾಗೂ ಹಣಕಾಸಿನ ಇತಿಮಿತಿಗಳನ್ನು ಒಳಗೊಂಡಿರುತ್ತದೆ. |
| ಆ) | ಹಾಗಿದ್ದಲ್ಲಿ ಈ ಕುರಿತು ಸರ್ಕಾರ ಕೈಗೊಂಡಿರುವ ಕ್ರಮವೇನು; ಯಾವ ಕಾಲಮಿತಿಯೊಳಗೆ ತಾಲ್ಲೂಕು ರಚನೆ ಮಾಡಲಾಗುವುದು (ವಿವರ ನೀಡುವುದು) | |

ಕಂಇ 118 ಭೂದಾಮ 2018

(ಆರ್.ವಿ. ದೇಶಪಾಂಡೆ).
ಕಂದಾಯ ಹಾಗೂ ಕೌಶಲ್ಯಾಭಿವೃದ್ಧಿ,
ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು



ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 409

ಸದಸ್ಯರ ಹೆಸರು : ಶ್ರೀ ಐಹೋಳೆ ಡಿ. ಮಹಾಲಿಂಗಪ್ಪ (ರಾಯಭಾಗ)

ಉತ್ತರಿಸುವವರು : ಮಾನ್ಯ ಕಂದಾಯ, ಕೌಶಲ್ಯ ಅಭಿವೃದ್ಧಿ ಮತ್ತು ಉದ್ಯಮಶೀಲತೆ ಹಾಗೂ ಜೀವನೋಪಾಯ ಸಚಿವರು

ಉತ್ತರಿಸಬೇಕಾದ ದಿನಾಂಕ : 10.12.2018

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| 1 | ಬೆಳಗಾವಿ ಜಿಲ್ಲೆಯ ಎಷ್ಟು ತಾಲ್ಲೂಕುಗಳನ್ನು ಬರಗಾಲ ಪೀಡಿತ ತಾಲ್ಲೂಕುಗಳೆಂದು ಘೋಷಣೆ ಮಾಡಲಾಗಿದೆ; ಈ ತಾಲ್ಲೂಕುಗಳಿಗೆ ಬರಗಾಲ ಪರಿಹಾರವಾಗಿ ಈವರೆವಿಗೂ ಎಷ್ಟು ಅನುದಾನವನ್ನು ಮಂಜೂರು ಮಾಡಿ ಬಿಡುಗಡೆಗೊಳಿಸಿದೆ (ವಿವರ ನೀಡುವುದು); | ಬೆಳಗಾವಿ ಜಿಲ್ಲೆಯಲ್ಲಿ ರಾಮದುರ್ಗ, ಸವದತ್ತಿ ಮತ್ತು ಅಥಣಿ ತಾಲ್ಲೂಕುಗಳನ್ನು ಬರಗಾಲ ಪೀಡಿತ ತಾಲ್ಲೂಕುಗಳೆಂದು ಘೋಷಣೆ ಮಾಡಲಾಗಿದೆ. ಪ್ರಕೃತಿ ವಿಕೋಪ ಪರಿಹಾರ ನಿಧಿಯಡಿ ಬೆಳಗಾವಿ ಜಿಲ್ಲೆಗೆ ರೂ.8.00 ಕೋಟಿ ಅನುದಾನ ಬಿಡುಗಡೆ ಮಾಡಲಾಗಿದೆ ಹಾಗೂ ಪ್ರತಿ ಬರ ಪೀಡಿತ ತಾಲ್ಲೂಕಿಗೆ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಿಂದ ರೂ.50.00 ಲಕ್ಷಗಳನ್ನು ಮಂಜೂರು ಮಾಡಲಾಗಿದೆ. |
| 2 | ಈ ಜಿಲ್ಲೆಯ ರಾಯಭಾಗ ತಾಲ್ಲೂಕನ್ನು ಬರಗಾಲ ಪೀಡಿತ ತಾಲ್ಲೂಕೆಂದು ಘೋಷಣೆ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಕೇಂದ್ರ ಸರ್ಕಾರದ ಬರ ನಿರ್ವಹಣೆ ಕೈಪಿಡಿ 2016 ರಲ್ಲಿ ಹೊರಡಿಸಿರುವ ಮಾರ್ಗ ಸೂಚಿಯಂತೆ ರಾಯಭಾಗ ತಾಲ್ಲೂಕನ್ನು ಮುಂಗಾರು ಋತುವಿಗೆ ಬರ ಪೀಡಿತವೆಂದು ಘೋಷಿಸಲು ಸಾಧ್ಯವಾಗಿರುವುದಿಲ್ಲ. |
| 3 | ಹಾಗಿಲ್ಲದಿದ್ದಲ್ಲಿ, ಇದುವರೆಗೂ ರಾಯಭಾಗ ತಾಲ್ಲೂಕನ್ನು ಬರಗಾಲ ಪೀಡಿತ ತಾಲ್ಲೂಕೆಂದು ಘೋಷಿಸದಿರಲು ಕಾರಣಗಳೇನು; ಈ ಬಗ್ಗೆ ಸರ್ಕಾರ ಕೈಗೊಳ್ಳುವ ಕ್ರಮಗಳೇನು (ವಿವರ ನೀಡುವುದು); | ಕೇಂದ್ರ ಸರ್ಕಾರವು ಪ್ರಕಟಿಸಿರುವ 2016 ರ ಬರ ಕೈಪಿಡಿ ಹಾಗೂ ಪರಿಷ್ಕೃತ ಮಾರ್ಗಸೂಚಿಯಲ್ಲಿ ಪ್ರಕಟಿಸಿರುವ ಕಡ್ಡಾಯ ಮಾನದಂಡಗಳಾದ ವಾಡಿಕೆಗಿಂತ ಶೇ.60 ರಷ್ಟು ಮಳೆ ಕೊರತೆ ಅಥವಾ ಸತತ 3 ವಾರ ಅಥವಾ ಅಧಿಕ ಶುಷ್ಕ ವಾತಾವರಣ ಹಾಗೂ ತತ್ಪರಿಣಾಮ ಮಾನದಂಡಗಳಾದ ತೇವಾಂಶ ಕೊರತೆ, ಬೆಳೆ ಬಿತ್ತನೆ ಪ್ರದೇಶ ಅಂತರ್ಜಲ ಕುಸಿತ ದೂರಸ್ಥ ಸಂವೇದಿ ಸೂಚ್ಯಂಕ ಹಾಗೂ ಜಲ ಸಂಪನ್ಮೂಲ ಸೂಚ್ಯಂಕ ಇವುಗಳ ಪೈಕಿ ಯಾವುದಾದರು 2 ಮಾನದಂಡಗಳು ಕಂಡು ಬಂದಿರಬೇಕು. ಆದರೆ |

| | | |
|---|---|---|
| | | ರಾಯಭಾಗ ತಾಲ್ಲೂಕಿನಲ್ಲಿ ಕೇವಲ ತೇವಾಂಶ ಕೊರತೆ 1 ಮಾನದಂಡ ಮಾತ್ರ ಇರುವುದು ಕಂಡುಬಂದಿದೆ. ಅದ್ದರಿಂದ ಈ ಮೇಲಿನ ಅಂಶಗಳನ್ನು ಗಮನಿಸಿ ರಾಯಭಾಗ ತಾಲ್ಲೂಕನ್ನು ಬರಪೀಡಿತ ತಾಲ್ಲೂಕೆಂದು ಘೋಷಣೆ ಮಾಡಲಾಗಿರುವುದಿಲ್ಲ. |
| 4 | ರಾಜ್ಯದಲ್ಲಿ ಬರಗಾಲ ಪೀಡಿತ ತಾಲ್ಲೂಕೆಂದು ಘೋಷಣೆ ಮಾಡಿರುವಲ್ಲಿ ಗೋ ಶಾಲೆ ಮತ್ತು ಮೇವು ಬ್ಯಾಂಕುಗಳನ್ನು ತೆರೆಯಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು (ವಿವರ ನೀಡುವುದು); | ಬರಗಾಲ ಪೀಡಿತ ತಾಲ್ಲೂಕುಗಳಲ್ಲಿ ಅವಶ್ಯಕತೆ ಅನುಸಾರ ಗೋಶಾಲೆ ಮತ್ತು ಮೇವಿನ ಬ್ಯಾಂಕ್‌ಗಳನ್ನು ತೆರೆಯಲು ಜಿಲ್ಲಾಡಳಿತಕ್ಕೆ ಸೂಚನ ನೀಡಲಾಗಿದೆ |

ಕಂಇ 261 ಟಿಎನ್‌ಆರ್ 2018

(ಆರ್.ವಿ. ದೇಶಪಾಂಡೆ)
ಕಂದಾಯ, ಕೌಶಲ್ಯ ಅಭಿವೃದ್ಧಿ ಮತ್ತು ಉದ್ಯಮಶೀಲತೆ
ಹಾಗೂ ಜೀವನೋಪಾಯ ಸಚಿವರು

# ಕರ್ನಾಟಕ ವಿಧಾನಸಭೆ

| | | |
|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 612 |
| 2 | ಸದಸ್ಯರ ಹೆಸರು | ಶ್ರೀ ದೊಡ್ಡನಗೌಡ ಜಿ.ಪಾಟೀಲ್ (ಹುನಗುಂದ) |
| 3 | ವಿಷಯ | ಮೂಲಭೂತ ಸೌಕರ್ಯ |
| 4 | ಉತ್ತರಿಸಬೇಕಾದ ದಿನಾಂಕ | 10.12.2018 |
| 5 | ಉತ್ತರಿಸುವ ಸಚಿವರು | ಕಂದಾಯ ಹಾಗೂ ಕೌಶಲ್ಯಾಭಿವೃದ್ಧಿ ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಹೊಸದಾಗಿ ಘೋಷಿಸಿದ ಇಳಕಲ್ ತಾಲ್ಲೂಕಿಗೆ ಮೂಲಭೂತ ಸೌಲಭ್ಯಗಳಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಬಂದಿದೆ.<br>ಸರ್ಕಾರದ ಆದೇಶ ಸಂಖ್ಯೆ: ಕಂಇ 167 ಭೂದಾಪು 2017 ದಿನಾಂಕ: 28.12.2017 ಮತ್ತು 07.03.2018 ಹಾಗೂ ಕಂಇ 73 ಭೂದಾಪು 2018 ದಿನಾಂಕ: 23.08.2018 ರ ಅನ್ವಯ ಹೊಸದಾಗಿ ರಚನೆಯಾದ ತಾಲ್ಲೂಕುಗಳ ಕಾರ್ಯಾರಂಭ ಮತ್ತು ಆಡಳಿತಾತ್ಮಕ ಪ್ರಕ್ರಿಯೆಯನ್ನು ಪ್ರಾರಂಭಿಸಲು ಹಾಗೂ ಮೂಲಭೂತ ಸೌಲಭ್ಯಗಳನ್ನು ಕಲ್ಪಿಸಲು ಪ್ರತಿ ತಾಲ್ಲೂಕಿಗೆ ಈವರೆಗೆ ಒಟ್ಟು ರೂ.15.00 ಲಕ್ಷ ಅನುದಾನವನ್ನು ಸಂಬಂಧಿಸಿದ ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲಾಗಿರುತ್ತದೆ.<br>ಮಿನಿ ವಿಧಾನಸೌಧ ಕಟ್ಟಡವನ್ನು ನಿರ್ಮಿಸುವ ಸಂಬಂಧ ಜಿಲ್ಲಾಧಿಕಾರಿಗಳಿಂದ ಪ್ರಸ್ತಾವನೆ ಸ್ವೀಕೃತ ವಾಗಿದ್ದು, ಪರಿಶೀಲನೆಯಲ್ಲಿದೆ. |
| ಆ) | ಹಾಗಿದ್ದಲ್ಲಿ, ಮೂಲಭೂತ ಸೌಲಭ್ಯಗಳನ್ನು ಒದಗಿಸಲು ಯಾವ ಕ್ರಮ ಕೈಗೊಳ್ಳಲಾಗಿದೆ; | |
| ಇ) | ಅಧಿಕಾರಿಗಳ ನಿಯೋಜನೆಯನ್ನು ಯಾವಾಗ ಮಾಡಲಾಗುವುದು (ಸಂಪೂರ್ಣ ವಿವರ ನೀಡುವುದು) | ಸರ್ಕಾರದ ಆದೇಶ ಸಂಖ್ಯೆ: ಕಂಇ 35 ಭೂದಾಪು 2017 ದಿನಾಂಕ: 17.01.2018ರಲ್ಲಿ ಕಛೇರಿಗೆ ಅಗತ್ಯವಾದ ಹುದ್ದೆಗಳನ್ನು ಸೃಜಿಸಲಾಗಿದೆ.<br>ತಹಶೀಲ್ದಾರ್ ಗ್ರೇಡ್-1 ಹುದ್ದೆಯನ್ನು ಭರ್ತಿ ಮಾಡಿದ್ದು ಇನ್ನುಳಿದ ಇಲಾಖೆಯ ಅಧಿಕಾರಿಗಳ ಹುದ್ದೆಗಳನ್ನು ತುಂಬಲು ಕ್ರಮವಹಿಸಲಾಗುತ್ತಿದ್ದು, ಶೀಘ್ರವಾಗಿ ಖಾಲಿ ಇರುವ ಹುದ್ದೆಗಳನ್ನು ತುಂಬಲಾಗುವುದು. |

ಕಂಇ 114 ಭೂದಾಪು 2018

**(ಆರ್.ವಿ. ದೇಶಪಾಂಡೆ)**
ಕಂದಾಯ ಹಾಗೂ ಕೌಶಲ್ಯಾಭಿವೃದ್ಧಿ
ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 645
ಸದಸ್ಯರ ಹೆಸರು : ಶ್ರೀ ಅರವಿಂದ ಲಿಂಬಾವಳಿ (ಮಹದೇವಪುರ)
ಉತ್ತರಿಸುವ ದಿನಾಂಕ : 10.12.2018
ಉತ್ತರಿಸುವ ಸಚಿವರು : ಕಂದಾಯ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಮಹದೇವಪುರ ವಿಧಾನಸಭಾ ಕ್ಷೇತ್ರದಲ್ಲಿ ಕಳೆದ 3 ವರ್ಷಗಳಲ್ಲಿ ಎಷ್ಟು ಸರ್ಕಾರಿ ಜಾಗವನ್ನು ವಿವಿಧ ಉದ್ದೇಶದಿಂದ ಮಂಜೂರು ಮಾಡಲಾಗಿದೆ; (ವಿವರ ನೀಡುವುದು) | ಮಹದೇವಪುರ ವಿಧಾನಸಭಾ ಕ್ಷೇತ್ರದಲ್ಲಿ ಒಟ್ಟು 244-29 ಎಕರೆ/ಗುಂಟೆ ಜಮೀನನ್ನು ಮಂಜೂರು ಮಾಡಿದ್ದು, ಈ ಪೈಕಿ 203-09 ಎಕರೆ/ಗುಂಟೆ ಜಾಗವನ್ನು ವಸತಿ ಉದ್ದೇಶಕ್ಕಾಗಿ ರಾಜೀವ್ ಗಾಂಧಿ ವಸತಿ ನಿಗಮ ನಿಯಮಿತ ರವರಿಗೆ ಹಾಗೂ ಆದೂರು ಗ್ರಾಮದ ಸ.ನಂ.74ರಲ್ಲಿ ವಿವಿಧ ಸಂಘ-ಸಂಸ್ಥೆಗಳಿಗೆ 41-10 ಎಕರೆ/ಗುಂಟೆ ಜಮೀನನ್ನು ಮಂಜೂರು ಮಾಡಲಾಗಿದೆ. |
| ಆ) | ವಸತಿ, ಸಂಘ ಸಂಸ್ಥೆಗಳಿಗೆ ಮತ್ತು ಸಾರ್ವಜನಿಕ ಉದ್ದೇಶಕ್ಕೆ ಮಂಜೂರು ಮಾಡಿರುವ ಜಮೀನು ಎಷ್ಟು; (ಸರ್ವೆ ನಂ. ಹಾಗೂ ಗ್ರಾಮದ ಹೆಸರಿನ ಸಮೇತ 3 ವರ್ಷಗಳ ವಿವರ ನೀಡುವುದು) | ವಸತಿ, ಸಂಘ ಸಂಸ್ಥೆಗಳಿಗೆ ಮತ್ತು ಸಾರ್ವಜನಿಕ ಉದ್ದೇಶಕ್ಕೆ ಮಂಜೂರು ಮಾಡಿರುವ ಜಮೀನುಗಳ ವಿವರವನ್ನು **ಅನುಬಂಧ-1**ರಲ್ಲಿ ಲಗತ್ತಿಸಿದೆ. |
| ಇ) | ಯಾವ ಯಾವ ಸಂಘ ಸಂಸ್ಥೆ ಮತ್ತು ಇತರೆ ವ್ಯಕ್ತಿಗಳು ಮಹದೇವಪುರ ವಿಧಾನಸಭಾ ಕ್ಷೇತ್ರದಲ್ಲಿ ಜಮೀನು ಮಂಜೂರು ಮಾಡುವಂತೆ ಅರ್ಜಿ ಸಲ್ಲಿಸಿರುತ್ತಾರೆ? (3 ವರ್ಷಗಳ ವಿವರ ನೀಡುವುದು) | ಮಹದೇವಪುರ ವಿಧಾನಸಭಾ ಕ್ಷೇತ್ರದಲ್ಲಿ ಜಮೀನು ಮಂಜೂರು ಮಾಡುವಂತೆ ಅರ್ಜಿ ಸಲ್ಲಿಸಿರುವವರ ವಿವರವನ್ನು **ಅನುಬಂಧ-2**ರಲ್ಲಿ ಲಗತ್ತಿಸಿದೆ. |

**ಸಂಖ್ಯೆ: ಆರ್‌ಡಿ 97 ಎಲ್‌ಜಿಕ್ಯೂ 2018**

**(ಆರ್.ವಿ.ದೇಶಪಾಂಡೆ)**
**ಕಂದಾಯ ಹಾಗೂ ಕೌಶಲ್ಯಾಭಿವೃದ್ಧಿ,**
**ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು**

ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 659
ಸದಸ್ಯರ ಹೆಸರು : ಶ್ರೀಮತಿ ಜೊಲ್ಲೆ ಶಶಿಕಲಾ ಅಣ್ಣಾಸಾಹೇಬ್ (ನಿಪ್ಪಾಣಿ)
ಉತ್ತರಿಸುವ ಸಚಿವರು : ಕಂದಾಯ ಸಚಿವರು
ಉತ್ತರಿಸುವ ದಿನಾಂಕ : 10.12.2018

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ನೂತನ ತಾಲ್ಲೂಕುಗಳಲ್ಲಿ ಮಿನಿ ವಿಧಾನಸೌಧ ಸ್ಥಾಪಿಸುವ ಪ್ರಸ್ತಾವನೆ ಯಾವ ಹಂತದಲ್ಲಿದೆ: | ನೂತನವಾಗಿ ಘೋಷಿತವಾಗಿರುವ ತಾಲ್ಲೂಕುಗಳ ಪೈಕಿ ಈವರೆಗೆ ಮೂಡಬಿದರೆ, ಕಡಬ, ಬ್ರಹ್ಮಾವರ ಮತ್ತು ದಾಂಡೇಲಿ ತಾಲ್ಲೂಕು ಮಿನಿ ವಿಧಾನಸೌಧಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು, ಕಾಪು, ಹೆಬ್ರಿ, ಬೈಂದೂರು, ಹನೂರು, ಇಳಕಲ್, ತಾಲ್ಲೂಕುಗಳಿಗೆ ಸಂಬಂಧಿಸಿದ ಪ್ರಸ್ತಾವನೆಗಳು ಸ್ವೀಕೃತವಾಗಿದ್ದು, ಸರ್ಕಾರದ ಪರಿಶೀಲನೆಯಲ್ಲಿವೆ. ಉಳಿದ ತಾಲ್ಲೂಕುಗಳಿಂದ ಪ್ರಸ್ತಾವನೆಗಳನ್ನು ನಿರೀಕ್ಷಿಸಲಾಗಿದೆ. |
| ಆ) | ಬೆಳಗಾವಿ ಜಿಲ್ಲೆ ನಿಪ್ಪಾಣಿ ತಾಲ್ಲೂಕಿನಲ್ಲಿ ಮಿನಿ ವಿಧಾನಸೌಧ ಕಟ್ಟಡ ನಿರ್ಮಾಣ ಮಾಡಲು ಇಲಾಖೆಯಿಂದ ಸ್ಥಳ ಗುರುತಿಸಲಾಗಿದೆಯೇ;ಗುರುತಿಸಿದ್ದಲ್ಲಿ ಎಲ್ಲಿ ಸ್ಥಳ ಗುರುತಿಸಲಾಗಿದೆ; (ವಿವರ ನೀಡುವುದು) | ನಿಪ್ಪಾಣಿ ತಾಲೂಕಿನಲ್ಲಿ ಮಿನಿ ವಿಧಾನಸೌಧ ಕಟ್ಟಡ ನಿರ್ಮಾಣ ಮಾಡಲು ಸ್ಥಳ ಗುರುತಿಸುವ ಪ್ರಕ್ರಿಯೆ ಚಾಲ್ತಿಯರುತ್ತದೆ. |
| ಇ) | ಬೆಳಗಾವಿ ಜಿಲ್ಲೆ ನಿಪ್ಪಾಣಿಯನ್ನು ತಾಲ್ಲೂಕಾಗಿ ಘೋಷಿಸಿದ್ದು, ಗ್ರಾಮಗಳ ಸೇರ್ಪಡೆ ಹಾಗೂ ಸರ್ವೇ ಕಾರ್ಯ ಪ್ರಾರಂಭವಾಗಿದೆಯೇ; ಇಲ್ಲದಿದ್ದಲ್ಲಿ ವಿಳಂಬಕ್ಕೆ ಕಾರಣವೇನು; | ಬೆಳಗಾವಿ ಜಿಲ್ಲೆ ನಿಪ್ಪಾಣಿಯನ್ನು ತಾಲ್ಲೂಕನ್ನಾಗಿ ಘೋಷಿಸಿದ್ದು, ಗ್ರಾಮಗಳನ್ನು ಸೇರ್ಪಡೆ ಮಾಡಲಾಗಿದೆ ಹಾಗೂ ತಾಲ್ಲೂಕಿನಲ್ಲಿ ಸರ್ವೇ ಕಾರ್ಯ ಪ್ರಾರಂಭವಾಗಿರುತ್ತದೆ. |
| ಈ) | ಸರ್ವೇ ಕಛೇರಿಯನ್ನು ನಿಪ್ಪಾಣಿಗೆ ನಿಯುಕ್ತಗೊಳಿಸಲಾಗಿದೆಯೇ? | ಸರ್ವೇ ಕಛೇರಿಯನ್ನು ನಿಪ್ಪಾಣಿಗೆ ವರ್ಗಾಯಿಸಲು ಕ್ರಮಕೈಗೊಳ್ಳಲಾಗುತ್ತಿದೆ. |

ಕಂಇ 81 ಡಬ್ಲ್ಯೂಬಿಆರ್ 2018

(ಆರ್.ವಿ. ದೇಶಪಾಂಡೆ)
ಕಂದಾಯ ಮತ್ತು ಕೌಶಲಾಭಿವೃದ್ಧಿ,
ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 649
ಸದಸ್ಯರ ಹೆಸರು : ಶ್ರೀ ಆರ್. ಮಂಜುನಾಥ್ (ದಾಸರಹಳ್ಳಿ)
ಉತ್ತರಿಸುವ ದಿನಾಂಕ : 10.12.2018
ಉತ್ತರಿಸುವ ಸಚಿವರು : ಕಂದಾಯ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಮಲ್ಲಸಂದ್ರ ಗ್ರಾಮದ ರೀಸ.ನಂ.33 ರಲ್ಲಿ ಸರ್ಕಾರಿ ಜಮೀನು ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಹಾಗಿದ್ದಲ್ಲಿ, ಈ ಸರ್ಕಾರಿ ಜಮೀನಿನಲ್ಲಿ ಅನಧಿಕೃತವಾಗಿ ಕಟ್ಟಡ ನಿರ್ಮಾಣವಾಗುತ್ತಿರುವ ಬಗ್ಗೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ (ಕೈಗೊಂಡಿರುವ ಕ್ರಮದ ಸಂಪೂರ್ಣ ಮಾಹಿತಿ ನೀಡುವುದು); | ಸರ್ವೆ ಇಲಾಖೆಯಿಂದ ಸರ್ವೆ ನಕ್ಷೆ ಹಾಗೂ ವರದಿ ಪಡೆಯುವ ಕಾರ್ಯ ಪ್ರಗತಿಯಲ್ಲಿದೆ. ವರದಿ ಪಡೆದ ನಂತರ ಕರ್ನಾಟಕ ಭೂ ಕಂದಾಯ ಕಾಯ್ದೆ, 1964ರ ಕಲಂ 192(ಎ) ಹಾಗೂ ಕಲಂ 94(3)ರಡಿ ಒತ್ತುವರಿದಾರರಿಗೆ ನೋಟೀಸ್ ನೀಡಿ ಒತ್ತುವರಿಯನ್ನು ತೆರವುಗೊಳಿಸಲು ಕ್ರಮ ಕೈಗೊಳ್ಳಲಾಗುವುದು. |
| ಇ) | ಕಟ್ಟಡ ಕಾಮಗಾರಿಗಳನ್ನು ನಡೆಸುತ್ತಿರುವವರ ವಿರುದ್ಧ ಸರ್ಕಾರ ಕೈಗೊಂಡಿರುವ ಕ್ರಮಗಳೇನು (ವಿವರ ನೀಡುವುದು); | |
| ಈ) | ಯಾವ ಕಾಲಾವಧಿಯಲ್ಲಿ ಈ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗುವುದು? | |

**ಸಂಖ್ಯೆ: ಆರ್‌ಡಿ 100 ಎಲ್‌ಜಿಕ್ಯೂ 2018**

(ಆರ್.ವಿ.ದೇಶಪಾಂಡೆ)
**ಕಂದಾಯ ಹಾಗೂ ಕೌಶಲ್ಯಾಭಿವೃದ್ಧಿ,**
**ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು**



ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 574
ಸದಸ್ಯರ ಹೆಸರು : ಶ್ರೀ ಹರೀಶ್ ಪೂಂಜ (ಬೆಳ್ತಂಗಡಿ)
ಉತ್ತರಿಸುವ ದಿನಾಂಕ : 10/12/2018
ಉತ್ತರಿಸುವ ಸಚಿವರು : ಕಂದಾಯ ಹಾಗೂ ಕೌಶಲ್ಯ ಅಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಬೆಳ್ತಂಗಡಿ ತಾಲ್ಲೂಕಿನ ವಿವಿಧ ಗ್ರಾಮಗಳಲ್ಲಿ ಮಂಜೂರಾಗಿರುವ ಗ್ರಾಮ ಕರಣಿಕರ ಹುದ್ದೆಗಳೆಷ್ಟು; ಕಾರ್ಯನಿರ್ವಹಿಸುತ್ತಿರುವ ಗ್ರಾಮ ಕರಣಿಕರ ಸಂಖ್ಯೆ ಎಷ್ಟು; | ಬೆಳ್ತಂಗಡಿ ತಾಲ್ಲೂಕಿಗೆ 48 ಗ್ರಾಮಕರಣಿಕರ ಹುದ್ದೆಗಳು ಮಂಜೂರಾಗಿದ್ದು, ಹಾಲಿ 44 ಗ್ರಾಮಕರಣಿಕರು ಕಾರ್ಯನಿರ್ವಹಿಸುತ್ತಿದ್ದಾರೆ. |
| ಆ | ಈ ತಾಲ್ಲೂಕಿನ ಎಷ್ಟು ಗ್ರಾಮಗಳಲ್ಲಿ ಗ್ರಾಮ ಕರಣಿಕರು ನಿಯೋಜನೆಗೊಂಡಿದ್ದಾರೆ; ಸದರಿ ತಾಲ್ಲೂಕಿನ ವಿವಿಧ ಗ್ರಾಮಗಳಲ್ಲಿ ಖಾಲಿ ಇರುವ ಹುದ್ದೆಗಳ ಭರ್ತಿಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು? | ಬೆಳ್ತಂಗಡಿ ತಾಲ್ಲೂಕಿನ 33 ಗ್ರಾಮಗಳಲ್ಲಿ ಗ್ರಾಮಕರಣಿಕರು ನಿಯೋಜನೆಗೊಂಡಿದ್ದಾರೆ.<br>ಪ್ರಸ್ತುತ ಖಾಲಿ ಇರುವ ಗ್ರಾಮಲೆಕ್ಕಿಗರ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಜಿಲ್ಲಾಧಿಕಾರಿಯವರು ಅಧಿಸೂಚನೆ ಹೊರಡಿಸಿರುತ್ತಾರೆ. |

ಸಂಖ್ಯೆ:ಕಂಇ 345 ಬಿಎಸ್‌ಸಿ 2018

(ಆರ್.ವಿ. ದೇಶಪಾಂಡೆ)
ಕಂದಾಯ ಹಾಗೂ ಕೌಶಲ್ಯ ಅಭಿವೃದ್ಧಿ, ಉದ್ಯಮಶೀಲತೆ
ಮತ್ತು ಜೀವನೋಪಾಯ ಸಚಿವರು.

# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 479 |
| ಉತ್ತರಿಸುವ ದಿನಾಂಕ | 10-12-2018 |
| ಮಾನ್ಯ ಸದಸ್ಯರ ಹೆಸರು | ಶ್ರೀ ಅಭಯ್ ಪಾಟೀಲ್ (ಬೆಳಗಾವಿ ದಕ್ಷಿಣ) |
| ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಳಗಾವಿ ಉಪನೋಂದಣಾಧಿಕಾರಿಗಳಿಗೆ ಬೆಳಗಾವಿ ಗ್ರಾಮದ ಸರ್ವೆ ನಂ:1286ರಲ್ಲಿ ತಾತ್ಕಾಲಿಕವಾಗಿ ಅನುಮೋದನೆಗೊಂಡ ಬಡಾವಣೆಯಲ್ಲಿರುವ ಯಾವೊಂದು ನಿವೇಶನಗಳನ್ನು ಖರೀದಿ/ಮಾರಾಟಕ್ಕೆ ಪರಿಗಣಿಸದಂತೆ ಬೆಳಗಾವಿ ನಗರಾಭಿವೃದ್ಧಿ ಪ್ರಾಧಿಕಾರದಿಂದ ಪತ್ರ ಬರೆದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಆದೇಶವಿದ್ದರೂ ಸರ್ವೆ ನಂ:1286ರಲ್ಲಿನ ಎಷ್ಟು ನಿವೇಶನಗಳನ್ನು ಮಾರಾಟ/ಖರೀದಿ ಮಾಡಲಾಗಿದೆ (ನಿವೇಶನದ ಅಳತೆ, ನಿವೇಶನದ ಸಂಖ್ಯೆ, ಮಾರಾಟ ಮಾಡಿರುವ ಮೊತ್ತ, ನೋಂದಣಿಗಾಗಿ ಪಡೆದ ಹಣ ಮುಂತಾದ ಸಂಪೂರ್ಣ ವಿವರ ನೀಡುವುದು); | ಅನುಬಂಧ-1ರಲ್ಲಿ ನೀಡಿದೆ. |
| ಇ) | ಪ್ರಾಧಿಕಾರದಿಂದ ಅಂತಿಮ ಅನುಮೋದನೆಯನ್ನು ಪಡೆಯದೇ, ತಾತ್ಕಾಲಿಕ ಅನುಮೋದಿಸಿದ ಬಡಾವಣೆ ಮತ್ತು ಅದರಲ್ಲಿ ವಿಧಿಸಿದ ಷರತ್ತುಗಳನ್ನು ಉಲ್ಲಂಘಿಸಿ, ನಿವೇಶನಗಳನ್ನು ನೋಂದಣಿ ಅಧಿಕಾರಿಗಳು ಕ್ರಯಪತ್ರ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಈ) | ಹಾಗಿದ್ದಲ್ಲಿ, ತಪ್ಪಿತಸ್ಥ ಅಧಿಕಾರಿಗಳ ವಿರುದ್ಧ ಕ್ರಮಕೈಗೊಳ್ಳಲಾಗುವುದೇ; | ತಪ್ಪಿತಸ್ಥ ಅಧಿಕಾರಿಗಳ ವಿರುದ್ಧ ನಿಯಮಾನುಸಾರ ಸೂಕ್ತ ಕ್ರಮ ಜರುಗಿಸಲು ಪರಿಶೀಲಿಸಲಾಗುತ್ತಿದೆ. |
| ಉ) | ಉಪ ನೋಂದಣಾಧಿಕಾರಿಗಳು, ಬೆಳಗಾವಿ ಇವರಿಗೆ ದಿನಾಂಕ: 01-01-2014 ರಿಂದ 25-11-2018ರ ಅವಧಿಯಲ್ಲಿ ಸಾರ್ವಜನಿಕರಿಂದ ಮತ್ತು ಸರ್ಕಾರದ ವಿವಿಧ ಇಲಾಖೆಗಳಿಂದ ವಿವಿಧ ಬಗೆಯ ನಿವೇಶನ/ಜಮೀನುಗಳ/ಖರೀದಿ/ ಮಾರಾಟವನ್ನು ನಿರ್ಬಂಧಿಸಲು ಬಂದಿರುವ ನಿರ್ದೇಶನಗಳು ಎಷ್ಟು (ವಿವರ ನೀಡುವುದು); | ಆಯುಕ್ತರು, ಬೆಳಗಾವಿ ನಗರಾಭಿವೃದ್ಧಿ ಪ್ರಾಧಿಕಾರ ಇವರಿಂದ ಒಂದು ಮನವಿಯು ಸ್ವೀಕೃತವಾಗಿರುತ್ತದೆ. |
| ಊ) | ನಿರ್ದೇಶನಗಳಿದ್ದಾಗ್ಯೂ ಕೂಡಾ ಖರೀದಿ ಮಾಡಿರುವ ವಿವಿಧ ನಿವೇಶನ/ಜಮೀನುಗಳ ಪೂರ್ಣ ವಿವರಗಳನ್ನು ಒದಗಿಸುವುದು? | ಅನುಬಂಧ-1ರಲ್ಲಿ ನೀಡಿದೆ. |

ಸಂಖ್ಯೆ: ಕಂಇ 207 ಮುನೋಸ 2018

(ಆರ್.ವಿ.ದೇಶಪಾಂಡೆ)
ಕಂದಾಯ ಹಾಗೂ ಕೌಶಲ್ಯಾಭಿವೃದ್ಧಿ,
ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು

ಅನುಬಂಧ-1

ಸರ್ವೆ ನಂ.1286

| ಕ್ರಮ ಸಂಖ್ಯೆ | ನಿವೇಶನ ಸಂಖ್ಯೆ | ಅಳತೆ | ಮಾರಾಟ ಮೊತ್ತ | ಮುದ್ರಾಂಕ ಶುಲ್ಕ | ನೋಂದಣಿ ಶುಲ್ಕ | ಒಟ್ಟು ರೂ.ಗಳಲ್ಲಿ |
|---|---|---|---|---|---|---|
| 1 | 62 | 150.415 sq mtr | 1700000/- | 95200 | 16970 | 112170 |
| 2 | 24 | 122.10 sq mtr | 1380000/- | 77280 | 13800 | 91080 |
| 3 | 45 | 108 sq mtr | 1221000 | 68635 | 12210 | 80845 |
| 4 | 96&97 | 9 sq mtr & 12 sq mtr | 2442000 | 137160 | 24420 | 161580 |
| 5 | 60 | 135.52 sq mtr | 1530900 | 86155 | 1510 | 87665 |
| 6 | 85 | 108 sq mtr | 1222000 | 68700 | 12220 | 80920 |
| 7 | 43 | 135 sq mtr | 1524600 | 85800 | 15250 | 101050 |
| 8 | 59 | 141.75 sq mtr | 1602000 | 90600 | 16200 | 106800 |
| 9 | 58 | 74.69 sq mtr | 860000 | 48400 | 8600 | 57000 |
| 10 | 58 | 74.69 sq mtr | 860000 | 48400 | 8600 | 57000 |
| 11 | 57 | 155.82 sq mtr | 1760000 | 999300 | 17700 | 117000 |
| 12 | 56 | 144.46 sq mtr | 1632000 | 92200 | 16400 | 108600 |
| 13 | 71 | 123.09 sq mtr | 1392000 | 78400 | 14000 | 92400 |
| 14 | 22 | 133.70 sq mtr | 1510950 | 84960 | 15110 | 100070 |
| 15 | 40 | 135 sq mtr | 1525800 | 85630 | 15260 | 100890 |
| 16 | 99 | 108 sq mtr | 1220000 | 68735 | 12220 | 80955 |
| 17 | 42 | 135 sq mtr | 1526000 | 85630 | 15260 | 100890 |
| 18 | 81 | 108 sq mtr | 1221000 | 68405 | 12210 | 80615 |
| 19 | 84 | 108 sq mtr | 1222000 | 68835 | 12220 | 81055 |
| 20 | 44 | 135 sq mtr | 1526000 | 85860 | 15260 | 101120 |
| 21 | 15 | 135 sq mtr | 1526000 | 85860 | 15260 | 101120 |
| 22 | 23 | 127.45 sq mtr | 1440000 | 80970 | 14440 | 95410 |
| 23 | 55 | 152 sq mtr | 1718000 | 96610 | 17180 | 113790 |
| 24 | 88 | 108 sq mtr | 1221000 | 68705 | 12210 | 80915 |
| 25 | 19 | 152.98 sq mtr | 1730000 | 97280 | 17300 | 114580 |
| 26 | 21 | 139.61 sq mtr | 1579000 | 89590 | 15790 | 105380 |
| 27 | 20 | 145.62 sq mtr | 1645000 | 92580 | 16460 | 109040 |
| 28 | 18 | 153.52 sq mtr | 1734600 | 97620 | 17360 | 114980 |
| 29 | 63 | 143.61 sq mtr | 1624000 | 91350 | 16240 | 107590 |
| 30 | 86 | 108 sq mtr | 1300000 | 73100 | 13000 | 86100 |
| 31 | 100 | 108 sq mtr | 1220000 | 68350 | 12200 | 80550 |
| 32 | 52 | 157.08 sq mtr | 3650000 | 204900 | 36500 | 241400 |
| 33 | 78 | 108 sq mtr | 1222000 | 68835 | 12220 | 81055 |
| 34 | 75 | 114.21 sq mtr | 1292550 | 72815 | 12930 | 85745 |
| 35 | 90 | 108 sq mtr | 1225000 | 68800 | 12250 | 81050 |

(ಟಿ.ನಾರಾಯಣಪ್ಪ)

ಸರ್ಕಾರದ ಉಪ ಕಾರ್ಯದರ್ಶಿ (ಪ್ರ),

ಕಂದಾಯ ಇಲಾಖೆ (ನೋಂ&ಮು).

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 645
ಸದಸ್ಯರ ಹೆಸರು : ಶ್ರೀ ಅರವಿಂದ ಲಿಂಬಾವಳಿ (ಮಹದೇವಪುರ)
ಉತ್ತರಿಸುವ ದಿನಾಂಕ : 10.12.2018
ಉತ್ತರಿಸುವ ಸಚಿವರು : ಕಂದಾಯ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಮಹದೇವಪುರ ವಿಧಾನಸಭಾ ಕ್ಷೇತ್ರದಲ್ಲಿ ಕಳೆದ 3 ವರ್ಷಗಳಲ್ಲಿ ಎಷ್ಟು ಸರ್ಕಾರಿ ಜಾಗವನ್ನು ವಿವಿಧ ಉದ್ದೇಶದಿಂದ ಮಂಜೂರು ಮಾಡಲಾಗಿದೆ; (ವಿವರ ನೀಡುವುದು) | ಮಹದೇವಪುರ ವಿಧಾನಸಭಾ ಕ್ಷೇತ್ರದಲ್ಲಿ ಒಟ್ಟು 244-29 ಎಕರೆ/ಗುಂಟೆ ಜಮೀನನ್ನು ಮಂಜೂರು ಮಾಡಿದ್ದು, ಈ ಪೈಕಿ 203-09 ಎಕರೆ/ಗುಂಟೆ ಜಾಗವನ್ನು ವಸತಿ ಉದ್ದೇಶಕ್ಕಾಗಿ ರಾಜೀವ್ ಗಾಂಧಿ ವಸತಿ ನಿಗಮ ನಿಯಮಿತ ರವರಿಗೆ ಹಾಗೂ ಆದೂರು ಗ್ರಾಮದ ಸ.ನಂ.74ರಲ್ಲಿ ವಿವಿಧ ಸಂಘ-ಸಂಸ್ಥೆಗಳಿಗೆ 41-10 ಎಕರೆ/ಗುಂಟೆ ಜಮೀನನ್ನು ಮಂಜೂರು ಮಾಡಲಾಗಿದೆ. |
| ಆ) | ವಸತಿ, ಸಂಘ ಸಂಸ್ಥೆಗಳಿಗೆ ಮತ್ತು ಸಾರ್ವಜನಿಕ ಉದ್ದೇಶಕ್ಕೆ ಮಂಜೂರು ಮಾಡಿರುವ ಜಮೀನು ಎಷ್ಟು; (ಸರ್ವೆ ನಂ. ಹಾಗೂ ಗ್ರಾಮದ ಹೆಸರಿನ ಸಮೇತ 3 ವರ್ಷಗಳ ವಿವರ ನೀಡುವುದು) | ವಸತಿ, ಸಂಘ ಸಂಸ್ಥೆಗಳಿಗೆ ಮತ್ತು ಸಾರ್ವಜನಿಕ ಉದ್ದೇಶಕ್ಕೆ ಮಂಜೂರು ಮಾಡಿರುವ ಜಮೀನುಗಳ ವಿವರವನ್ನು **ಅನುಬಂಧ-1**ರಲ್ಲಿ ಲಗತ್ತಿಸಿದೆ. |
| ಇ) | ಯಾವ ಯಾವ ಸಂಘ ಸಂಸ್ಥೆ ಮತ್ತು ಇತರೆ ವ್ಯಕ್ತಿಗಳು ಮಹದೇವಪುರ ವಿಧಾನಸಭಾ ಕ್ಷೇತ್ರದಲ್ಲಿ ಜಮೀನು ಮಂಜೂರು ಮಾಡುವಂತೆ ಅರ್ಜಿ ಸಲ್ಲಿಸಿರುತ್ತಾರೆ? (3 ವರ್ಷಗಳ ವಿವರ ನೀಡುವುದು) | ಮಹದೇವಪುರ ವಿಧಾನಸಭಾ ಕ್ಷೇತ್ರದಲ್ಲಿ ಜಮೀನು ಮಂಜೂರು ಮಾಡುವಂತೆ ಅರ್ಜಿ ಸಲ್ಲಿಸಿರುವವರ ವಿವರವನ್ನು ಅನುಬಂಧ-2ರಲ್ಲಿ ಲಗತ್ತಿಸಿದೆ. |

**ಸಂಖ್ಯೆ: ಆರ್‌ಡಿ 97 ಎಲ್‌ಜಿಕ್ಯೂ 2018**

**(ಆರ್.ವಿ.ದೇಶಪಾಂಡೆ)**
**ಕಂದಾಯ ಹಾಗೂ ಕೌಶಲ್ಯಾಭಿವೃದ್ಧಿ,**
**ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು**

| | | | | | |
|---|---|---|---|---|---|
| 8783 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಹೊಳೆಹೊನ್ನೂರು | ಸಿದ್ದಿಪುರ |
| 8784 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಕಸಬ | ಮಾಳೇನಹಳ್ಳಿ |
| 8785 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಕಸಬ | ಹಳ್ಳಿಕೆರೆ |
| 8786 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಕಸಬ | ಕಾಗೆಕೋಡಮಗ್ಗಿ |
| 8787 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಕೂಡ್ಲಿಗೇರಿ | ತಳ್ಳಿಕಟ್ಟೆ |
| 8788 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಕೂಡ್ಲಿಗೇರಿ | ವೀರಾಪುರ |
| 8789 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಕಸಬ | ಬಾಳೆಮಾರನಹಳ್ಳಿ |
| 8790 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಕಸಬ | ಸಿರಿಯೂರು |
| 8791 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಕಸಬ | ಉಜ್ಜನಿಪುರ |
| 8792 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಕಸಬ | ಚಿಕ್ಕಗೊಟ್ಟಿನಹಳ್ಳಿ |
| 8793 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಕಸಬ | ಬಿಳಕಿ |
| 8794 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಕಸಬ | ಬಾರಂದೂರು |
| 8795 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಕಸಬ | ಕಾರೆಹಳ್ಳಿ |
| 8796 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಕಸಬ | ದೊಡ್ಡಗೊಪ್ಪೇನಹಳ್ಳಿ |
| 8797 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಕಸಬ | ಹೊಳನೇರಲಕೆರೆ |
| 8798 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಕಸಬ | ಹೊನ್ನೆಹಟ್ಟಿ |
| 8799 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಕಸಬ | ಕೋಮಾರನಹಳ್ಳಿ |
| 8800 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಕಸಬ | ಮಲ್ಲಿಗೇನಹಳ್ಳಿ |
| 8801 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಕಸಬ | ದಾನವಾಡಿ |
| 8802 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಹೊಳೆಹೊನ್ನೂರು | ದಣಾಯಕಪುರ |
| 8803 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಕಸಬ | ಜಂಗಮರಹಳ್ಳಿ |
| 8804 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಕಸಬ | ಸೈದರಕಲ್ಲಹಳ್ಳಿ |
| 8805 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಹೊಳೆಹೊನ್ನೂರು | ಆನವೇರಿ |
| 8806 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಹೊಳೆಹೊನ್ನೂರು | ಚಂದನಕೆರೆ |
| 8807 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಹೊಳೆಹೊನ್ನೂರು | ಅಗರದಹಳ್ಳಿ |
| 8808 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಹೊಳೆಹೊನ್ನೂರು | ಹಂಚಿನಸಿದ್ದಾಪುರ |
| 8809 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಹೊಳೆಹೊನ್ನೂರು | ಕನಸಿನಕಟ್ಟೆ |
| 8810 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಹೊಳೆಹೊನ್ನೂರು | ಕಲ್ಲಾಪುರ |
| 8811 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಹೊಳೆಹೊನ್ನೂರು | ಹನುಮಂತಪುರ |
| 8812 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಹೊಳೆಹೊನ್ನೂರು | ಅಗರದಹಳ್ಳಿ |
| 8813 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಹೊಳೆಹೊನ್ನೂರು | ತಟ್ಟೆಹಳ್ಳಿ |
| 8814 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಹೊಳೆಹೊನ್ನೂರು | ಅರಬಿಳಚಿ |
| 8815 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಹೊಳೆಹೊನ್ನೂರು | ಅರಹೊಳಲು |
| 8816 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಕೂಡ್ಲಿಗೆರೆ | ಅರಳಿಹಳ್ಳಿ |
| 8817 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಕೂಡ್ಲಿಗೆರೆ | ಅಂತರಗಂಗೆ |
| 8818 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಕೂಡ್ಲಿಗೆರೆ | ಕಲ್ಲನಹಳ್ಳಿ |
| 8819 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಕೂಡ್ಲಿಗೆರೆ | ಕಣಕಟ್ಟೆ |
| 8820 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಕೂಡ್ಲಿಗೆರೆ | ಕಾಚಗೊಂಡನಹಳ್ಳಿ |
| 8821 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಕೂಡ್ಲಿಗೆರೆ | ಗುಡ್ಡದನೇರಲೆಕೆರೆ |
| 8822 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಕೂಡ್ಲಿಗೆರೆ | ಗೌಡರಹಳ್ಳಿ |
| 8823 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಕೂಡ್ಲಿಗೆರೆ | ಕೋಡಿಹಳ್ಳಿ |
| 8824 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಕೂಡ್ಲಿಗೆರೆ | ಕೂಡ್ಲಿಗೆರೆ |
| 8825 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಕೂಡ್ಲಿಗೆರೆ | ಯರೇಹಳ್ಳಿ |
| 8826 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಕೂಡ್ಲಿಗೆರೆ | ಅರಸೀಘಟ್ಟ |
| 8827 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಹೊಳೆಹೊನ್ನೂರು | ಜಂಬದಘಟ್ಟ |
| 8828 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಹೊಳೆಹೊನ್ನೂರು | ವಡೇರಪುರ |
| 8829 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಹೊಳೆಹೊನ್ನೂರು | ಮುಗೋಟೆ |
| 8830 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಹೊಳೆಹೊನ್ನೂರು | ದಿಗ್ಗೇನಹಳ್ಳಿ |
| 8831 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಹೊಳೆಹೊನೂರು | ಮೂಡಲವಿಠಲಾಪುರ |
| 8832 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಹೊಳೆಹೊನೂರು | ಮಲ್ಲಿಗೆನಹಳ್ಳಿ |
| 8833 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಕೂಡ್ಲಿಗೆರೆ | ಬಾಬಳ್ಳಿ |
| 8834 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಮತ್ತೂರು | ಹೊಸ ಅಗ್ರಹಾರ |
| 8835 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಆಗುಂಬೆ | ಬಾಳೆಹಳ್ಳಿ |
| 8836 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಕಸಬಾ | ಮುಳಬಾಗಿಲು |

| | | | | | |
|---|---|---|---|---|---|
| 8837 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಆಗುಂಬೆ | ಮಳಲೂರು |
| 8838 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಆಗುಂಬೆ | ಕೇಸಲೂರು |
| 8839 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಕಸಬಾ | ಹೆರಬೈಲು |
| 8840 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಕಸಬಾ | ಕೋಡ್ಲು |
| 8841 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಕಸಬಾ | ಹುಣಸನಹಳ್ಳಿ |
| 8842 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಕಸಬಾ | ಸಾಲೂರು |
| 8843 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಕಸಬಾ | ಮೇಗದಹಳ್ಳಿ |
| 8844 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಕಸಬ | ನಂಟೂರು |
| 8845 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಕಸಬ | ಬಿಳುವೆಹರಿಹರಪುರ |
| 8846 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಕಸಬ | ತೆಂಗಿನಕೊಪ್ಪ |
| 8847 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಕಸಬ | ಭಾರತೀಪುರ |
| 8848 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಕಸಬ | ಕುಡುಮಲ್ಲಿಗೆ |
| 8849 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಕಸಬ | ಚಂಗಾರು |
| 8850 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಕಸಬ | ಬಿಳವೆ |
| 8851 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಕಸಬ | ಬೇಳೂರು |
| 8852 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಕಸಬ | ಬೋವ್ಹಿ |
| 8853 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಕಸಬ | ಅರಗ |
| 8854 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಕಸಬ | ನೇರಲಮನೆ |
| 8855 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಕಸಬ | ಅರಳಾಪುರ |
| 8856 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಮತ್ತೂರು | ಹಾರೋಗೋಳಿಗೆ |
| 8857 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಮಂಡಗದ್ದೆ | ತೂದೂರು |
| 8858 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಮಂಡಗದ್ದೆ | ಬೇಗುವಳ್ಳಿ |
| 8859 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಕಸಬ | ಸರಳ |
| 8860 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಮಂಡಗದ್ದೆ | ಬಿಕ್ಕಿಕಂಚಿಗುಡ್ಡೆ |
| 8861 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಅಗ್ರಹಾರ | ಮುನಿಯೂರು |
| 8862 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಕಸಬ | ಹಿರೇಗದ್ದೆ |
| 8863 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಅಗ್ರಹಾರ | ಹುಂಚದಕಟ್ಟೆ |
| 8864 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಕಸಬ | ಮಿಟ್ಲಗೋಡು |
| 8865 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಅಗ್ರಹಾರ | ಶಂಕರಪುರ |
| 8866 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಕಸಬ | ನಕ್ರಕೋಡು |
| 8867 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಕಸಬ | ಕೊಕ್ಕೋಡು |
| 8868 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಅಗ್ರಹಾರ | ಖಂಡಕ |
| 8869 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಅಗ್ರಹಾರ | ಯಮರವಳ್ಳಿ |
| 8870 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಕಸಬ | ಬೋಗೂರುಕೊಪ್ಪ |
| 8871 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಅಗ್ರಹಾರ | ಅರಳಸುರುಳಿ |
| 8872 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಆಗುಂಬೆ | ಬಿದರಗೋಡು |
| 8873 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಅಗ್ರಹಾರ | ಬಂದ್ಯಾ |
| 8874 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಕಸಬ | ಕಬ್ಬಲಗ |
| 8875 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಕಸಬ | ಬೀಸು |
| 8876 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಕಸಬ | ಅಗಳಬಾಗಿಲು |
| 8877 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಅಗ್ರಹಾರ | ನೊಣಬೂರು |
| 8878 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | 0 | ನಿಜಗೂರು |
| 8879 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಮತ್ತೂರು | ಮೇಳಿಗೆ |
| 8880 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಮತ್ತೂರು | ಹೊನ್ನೆಕೆರೆ |
| 8881 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಅಗ್ರಹಾರ | ವಿರೂಪಪುರ |
| 8882 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಮಂಡಗದ್ದೆ | ಬಾಂಡ್ಯ |
| 8883 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಮಂಡಗದ್ದೆ | ಶೀಕೆ |
| 8884 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಮಂಡಗದ್ದೆ | ಕನ್ನಂಗಿ |
| 8885 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಮಂಡಗದ್ದೆ | ಮರಹಳ್ಳಿ |
| 8886 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಮಂಡಗದ್ದೆ | ಮಂಡುವಳ್ಳಿ |
| 8887 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಮುತ್ತೂರು | ಕ್ಯಾದಿಗೆರೆ |
| 8888 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಮುತ್ತೂರು | ಆಲ್ಮನೆ |
| 8889 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಕಸಬಾ | ಲಕ್ಕುಂದ |
| 8890 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಆಗುಂಬೆ | ಬಗ್ಗೂಡಿಗೆ |

| | | | | | |
|---|---|---|---|---|---|
| 8891 | ಶಿವಮೊಗ್ಗ | ತೀರ್ಥಹಳ್ಳಿ | ತೀರ್ಥಹಳ್ಳಿ | ಮುತ್ತೂರು | ಸಾಲ್ಗಡಿ |
| 8892 | ಶಿವಮೊಗ್ಗ | ಶಿಕಾರಿಪುರ | ಶಿಕಾರಿಪುರ | ತಾಳಗುಂದ | ಮಳೂರು |
| 8893 | ಶಿವಮೊಗ್ಗ | ಶಿಕಾರಿಪುರ | ಶಿಕಾರಿಪುರ | ತಾಳಗುಂದ | ಮಳವಳ್ಳಿ |
| 8894 | ಶಿವಮೊಗ್ಗ | ಶಿಕಾರಿಪುರ | ಶಿಕಾರಿಪುರ | ಉಡುಗಣಿ | ಕಡೇನಂದಿಹಳ್ಳಿ |
| 8895 | ಶಿವಮೊಗ್ಗ | ಶಿಕಾರಿಪುರ | ಶಿಕಾರಿಪುರ | ಹೊಸೂರು | ಗೊಗ್ಗ |
| 8896 | ಶಿವಮೊಗ್ಗ | ಶಿಕಾರಿಪುರ | ಶಿಕಾರಿಪುರ | ಅಂಜನಾಪುರ | ಅರಿಷಿಣಗೆರೆ |
| 8897 | ಶಿವಮೊಗ್ಗ | ಶಿಕಾರಿಪುರ | ಶಿಕಾರಿಪುರ | ಹೊಸೂರು | ಮುಗಳಗೆರೆ |
| 8898 | ಶಿವಮೊಗ್ಗ | ಶಿಕಾರಿಪುರ | ಶಿಕಾರಿಪುರ | ಅಜ್ಜನಾಪುರ | ಚುರ್ಚುಗುಂಟೆ |
| 8899 | ಶಿವಮೊಗ್ಗ | ಶಿಕಾರಿಪುರ | ಶಿಕಾರಿಪುರ | ಹೊಸೂರು | ದಬ್ಬಣಬೈರನಹಳ್ಳಿ |
| 8900 | ಶಿವಮೊಗ್ಗ | ಶಿಕಾರಿಪುರ | ಶಿಕಾರಿಪುರ | ಹೊಸೂರು | ಮಟ್ಟೆಕೋಟೆ |
| 8901 | ಶಿವಮೊಗ್ಗ | ಶಿಕಾರಿಪುರ | ಶಿಕಾರಿಪುರ | ಹೊಸೂರು | ಕಲ್ಮನೆ |
| 8902 | ಶಿವಮೊಗ್ಗ | ಶಿಕಾರಿಪುರ | ಶಿಕಾರಿಪುರ | ಅಂಜನಾಪುರ | ದೊಡ್ಡಬೋಗಿಹಳ್ಳಿ |
| 8903 | ಶಿವಮೊಗ್ಗ | ಶಿಕಾರಿಪುರ | ಶಿಕಾರಿಪುರ | ಅಂಜನಾಪುರ | ಹಿತ್ತಲ |
| 8904 | ಶಿವಮೊಗ್ಗ | ಶಿಕಾರಿಪುರ | ಶಿಕಾರಿಪುರ | ಅಂಜನಾಪುರ | ಈಸೂರು |
| 8905 | ಶಿವಮೊಗ್ಗ | ಶಿಕಾರಿಪುರ | ಶಿಕಾರಿಪುರ | ಅಂಜನಾಪುರ | ಸಾಲೂರು |
| 8906 | ಶಿವಮೊಗ್ಗ | ಶಿಕಾರಿಪುರ | ಶಿಕಾರಿಪುರ | ಹೊಸೂರು | ಅರಳೇಹಳ್ಳಿ |
| 8907 | ಶಿವಮೊಗ್ಗ | ಶಿಕಾರಿಪುರ | ಶಿಕಾರಿಪುರ | ತಾಳಗುಂದ | ತಾಳಗುಂದ |
| 8908 | ಶಿವಮೊಗ್ಗ | ಶಿಕಾರಿಪುರ | ಶಿಕಾರಿಪುರ | ತಾಳಗುಂದ | ಕವುಲಿ |
| 8909 | ಶಿವಮೊಗ್ಗ | ಶಿಕಾರಿಪುರ | ಶಿಕಾರಿಪುರ | ತಾಳಗುಂದ | ಕಣಸೋಗಿ |
| 8910 | ಶಿವಮೊಗ್ಗ | ಶಿಕಾರಿಪುರ | ಶಿಕಾರಿಪುರ | ತಾಳಗುಂದ | ಕೊರಟಗೆರೆ |
| 8911 | ಶಿವಮೊಗ್ಗ | ಶಿಕಾರಿಪುರ | ಶಿಕಾರಿಪುರ | ಅಂಜನಾಪುರ | ಚಿಕ್ಕಜೋಗಿಹಳ್ಳಿ |
| 8912 | ಶಿವಮೊಗ್ಗ | ಶಿಕಾರಿಪುರ | ಶಿಕಾರಿಪುರ | ಅಂಜನಾಪುರ | ಚಿಕ್ಕಕೊರ್ಲಹಳ್ಳಿ |
| 8913 | ಶಿವಮೊಗ್ಗ | ಶಿಕಾರಿಪುರ | ಶಿಕಾರಿಪುರ | ಹೊಸೂರು | ವಡೆಯರಪುರ |
| 8914 | ಶಿವಮೊಗ್ಗ | ಶಿಕಾರಿಪುರ | ಶಿಕಾರಿಪುರ | ಹೊಸೂರು | ಬಂಡಿಬೈರನಹಳ್ಳಿ |
| 8915 | ಶಿವಮೊಗ್ಗ | ಶಿಕಾರಿಪುರ | ಶಿಕಾರಿಪುರ | ಹೊಸೂರು | ನಳ್ಳಿನಕೊಪ್ಪ |
| 8916 | ಶಿವಮೊಗ್ಗ | ಶಿಕಾರಿಪುರ | ಶಿಕಾರಿಪುರ | ಹೊಸೂರು | ಬಾಳೆಕೊಪ್ಪ |
| 8917 | ಶಿವಮೊಗ್ಗ | ಶಿಕಾರಿಪುರ | ಶಿಕಾರಿಪುರ | ಹೊಸೂರು | ತಿಮ್ಲಾಪುರ |
| 8918 | ಶಿವಮೊಗ್ಗ | ಶಿಕಾರಿಪುರ | ಶಿಕಾರಿಪುರ | ಕಸಬ | ಕಪ್ಪನಹಳ್ಳಿ |
| 8919 | ಶಿವಮೊಗ್ಗ | ಶಿಕಾರಿಪುರ | ಶಿಕಾರಿಪುರ | ಕಸಬ | ಕೋಟಿಪುರ |
| 8920 | ಶಿವಮೊಗ್ಗ | ಶಿಕಾರಿಪುರ | ಶಿಕಾರಿಪುರ | ಕಸಬ | ಚಿಕ್ಕಲವತ್ತಿ |
| 8921 | ಶಿವಮೊಗ್ಗ | ಶಿಕಾರಿಪುರ | ಶಿಕಾರಿಪುರ | ಕಸಬ | ಹಿರೇಕಲವತ್ತಿ |
| 8922 | ಶಿವಮೊಗ್ಗ | ಶಿಕಾರಿಪುರ | ಶಿಕಾರಿಪುರ | ಕಸಬ | ಚಿಕ್ಕೊರ್ಲಹಳ್ಳಿ |
| 8923 | ಶಿವಮೊಗ್ಗ | ಶಿಕಾರಿಪುರ | ಶಿಕಾರಿಪುರ | ಹೊಸೂರು | ಗುಡ್ಡದತುಮ್ಮಿನಕಟ್ಟೆ |
| 8924 | ಶಿವಮೊಗ್ಗ | ಸಾಗರ | ಸಾಗರ | ಕಸಬ | ಚಿಕ್ಕನೆಲ್ಲೂರು |
| 8925 | ಶಿವಮೊಗ್ಗ | ಸಾಗರ | ಸಾಗರ | ಕಸಬ | ನಾಡಕಲಸೆ |
| 8926 | ಶಿವಮೊಗ್ಗ | ಸಾಗರ | ಸಾಗರ | ಕಸಬ | ಮಾಲ್ವೆ |
| 8927 | ಶಿವಮೊಗ್ಗ | ಸಾಗರ | ಸಾಗರ | ತಾಳಗುಪ್ಪ | ಬರದವಳ್ಳಿ |
| 8928 | ಶಿವಮೊಗ್ಗ | ಸಾಗರ | ಸಾಗರ | ತಾಳಗುಪ್ಪ | ತಾಳಗುಪ್ಪ |
| 8929 | ಶಿವಮೊಗ್ಗ | ಸಾಗರ | ಸಾಗರ | ಕಸಬ | ಸಂಗಳ |
| 8930 | ಶಿವಮೊಗ್ಗ | ಸಾಗರ | ಸಾಗರ | ಕಸಬ | ಬಿಳಿಸಿರಿ |
| 8931 | ಶಿವಮೊಗ್ಗ | ಸಾಗರ | ಸಾಗರ | ಕಸಬಾ | ಶಿರುವಾಳ |
| 8932 | ಶಿವಮೊಗ್ಗ | ಸಾಗರ | ಸಾಗರ | ಕಸಬಾ | ಮರೂರು |
| 8933 | ಶಿವಮೊಗ್ಗ | ಸಾಗರ | ಸಾಗರ | ಕಸಬಾ | ಮಳ್ಳ |
| 8934 | ಶಿವಮೊಗ್ಗ | ಸಾಗರ | ಸಾಗರ | ತಾಳಗುಪ್ಪ | ತಡಗಳಲೆ |
| 8935 | ಶಿವಮೊಗ್ಗ | ಸಾಗರ | ಸಾಗರ | ತಾಳಗುಪ್ಪ | ಶುಂಠಿಕೊಪ್ಪ |
| 8936 | ಶಿವಮೊಗ್ಗ | ಸಾಗರ | ಸಾಗರ | ತಾಳಗುಪ್ಪ | ಮರತ್ತೂರು |
| 8937 | ಶಿವಮೊಗ್ಗ | ಸಾಗರ | ಸಾಗರ | ಆವಿನಹಳ್ಳಿ | ಆವಿನಹಳ್ಳಿ |
| 8938 | ಶಿವಮೊಗ್ಗ | ಸಾಗರ | ಸಾಗರ | ಆವಿನಹಳ್ಳಿ | ಹಿರೆನಲ್ಲೂರು |
| 8939 | ಶಿವಮೊಗ್ಗ | ಸಾಗರ | ಸಾಗರ | ಆನಂದಪುರ | ಯಡೇಹಳ್ಳಿ |
| 8940 | ಶಿವಮೊಗ್ಗ | ಸಾಗರ | ಸಾಗರ | ಆನಂದಪುರ | ಮಲಂದೂರು |
| 8941 | ಶಿವಮೊಗ್ಗ | ಸಾಗರ | ಸಾಗರ | ಆನಂದಪುರ | ಬೆಳಂದೂರು |
| 8942 | ಶಿವಮೊಗ್ಗ | ಸಾಗರ | ಸಾಗರ | ಆನಂದಪುರ | ಚನ್ನಶೆಟ್ಟಿಕೊಪ್ಪ |
| 8943 | ಶಿವಮೊಗ್ಗ | ಸಾಗರ | ಸಾಗರ | ಆನಂದಪುರ | ಕುಡಿಗೆರೆ |
| 8944 | ಶಿವಮೊಗ್ಗ | ಸಾಗರ | ಸಾಗರ | ಆನಂದಪುರ | ಹಿರೆಹರಕ |

| | | | | | |
|---|---|---|---|---|---|
| 8945 | ಶಿವಮೊಗ್ಗ | ಸಾಗರ | ಸಾಗರ | ಕರೂರು | ಮಳೂರು |
| 8946 | ಶಿವಮೊಗ್ಗ | ಸಾಗರ | ಸಾಗರ | ಕಸಬ | ಬರೂರು |
| 8947 | ಶಿವಮೊಗ್ಗ | ಸಾಗರ | ಸಾಗರ | ತಾಳಗುಪ್ಪ | ಶಿರೂರು |
| 8948 | ಶಿವಮೊಗ್ಗ | ಸಾಗರ | ಸಾಗರ | ಆನಂದಪುರ | ಲಕ್ಕವಳ್ಳಿ |
| 8949 | ಶಿವಮೊಗ್ಗ | ಸಾಗರ | ಸಾಗರ | ಕಸಬ | ಭೀಮನೇರಿ |
| 8950 | ಶಿವಮೊಗ್ಗ | ಸಾಗರ | ಸಾಗರ | ಕಸಬ | ಕರೆಹಿತ್ಲು |
| 8951 | ಶಿವಮೊಗ್ಗ | ಸಾಗರ | ಸಾಗರ | ಕಸಬ | ಲಾವಿಗೆರೆ |
| 8952 | ಶಿವಮೊಗ್ಗ | ಸಾಗರ | ಸಾಗರ | ಕಸಬ | ಯಲಗಳಲೆ |
| 8953 | ಶಿವಮೊಗ್ಗ | ಸಾಗರ | ಸಾಗರ | ತಾಳಗುಪ್ಪ | ಸೈದೂರು |
| 8954 | ಶಿವಮೊಗ್ಗ | ಸಾಗರ | ಸಾಗರ | ತಾಳಗುಪ್ಪ | ತಲವಾಟ |
| 8955 | ಶಿವಮೊಗ್ಗ | ಸಾಗರ | ಸಾಗರ | ತಾಳಗುಪ್ಪ | ಕುಗ್ವೆ |
| 8956 | ಶಿವಮೊಗ್ಗ | ಸಾಗರ | ಸಾಗರ | ತಾಳಗುಪ್ಪ | ಹುಣಸೂರು |
| 8957 | ಶಿವಮೊಗ್ಗ | ಸಾಗರ | ಸಾಗರ | ಆನಂದಪುರ | ಶಿರವಂತೆ |
| 8958 | ಶಿವಮೊಗ್ಗ | ಸಾಗರ | ಸಾಗರ | ಆನಂದಪುರ | ಭೈರಾಪುರ |
| 8959 | ಶಿವಮೊಗ್ಗ | ಸಾಗರ | ಸಾಗರ | ಆವಿನಹಳ್ಳಿ | ಯಡಜಿಗಳೆಮನೆ |
| 8960 | ಶಿವಮೊಗ್ಗ | ಸಾಗರ | ಸಾಗರ | ತಾಳಗುಪ್ಪೆ | ಹೊಸಕೊಪ್ಪ |
| 8961 | ಶಿವಮೊಗ್ಗ | ಸಾಗರ | ಸಾಗರ | ಆವಿನಹಳ್ಳಿ | ಕೆಳದಿ |
| 8962 | ಶಿವಮೊಗ್ಗ | ಸಾಗರ | ಸಾಗರ | ಕಸಬ | ಪವಡಗೋಡು |
| 8963 | ಶಿವಮೊಗ್ಗ | ಸಾಗರ | ಸಾಗರ | ಆನಂದಪುರ | ಹಿರೇಬಿಲಗುಂಜಿ |
| 8964 | ಶಿವಮೊಗ್ಗ | ಸಾಗರ | ಸಾಗರ | ಕಸಬ | ನಾಡಮಂಚಾಲೆ |
| 8965 | ಶಿವಮೊಗ್ಗ | ಸಾಗರ | ಸಾಗರ | ಕಸಬ | ಉಳ್ಳುರು |
| 8966 | ಶಿವಮೊಗ್ಗ | ಸಾಗರ | ಸಾಗರ | ಕಸಬ | ಬಳಸಗೋಡು |
| 8967 | ಶಿವಮೊಗ್ಗ | ಸಾಗರ | ಸಾಗರ | ತಾಳಗುಪ್ಪ | ದೊಂಬೆ |
| 8968 | ಶಿವಮೊಗ್ಗ | ಸಾಗರ | ಸಾಗರ | ಆವಿನಹಳ್ಳಿ | ಹಳೇಇಕ್ಕೇರಿ |
| 8969 | ಶಿವಮೊಗ್ಗ | ಸಾಗರ | ಸಾಗರ | ಕರೂರು | ಕಾರಣಿ |
| 8970 | ಶಿವಮೊಗ್ಗ | ಸಾಗರ | ಸಾಗರ | ಕರೂರು | ಆಡಗಳಲೆ |

| | | | | | |
|---|---|---|---|---|---|
| 8971 | ಶಿವಮೊಗ್ಗ | ಸಾಗರ | ಸಾಗರ | ಕರೂರು | ಕೋಡನವಳ್ಳಿ |
| 8972 | ಶಿವಮೊಗ್ಗ | ಸಾಗರ | ಸಾಗರ | ಆನಂದಪುರ | ಸಂಪಳ್ಳಿ |
| 8973 | ಶಿವಮೊಗ್ಗ | ಸೊರಬ | ಸೊರಬ | ಕಸಬಾ | ಗುಡವಿ |
| 8974 | ಶಿವಮೊಗ್ಗ | ಸೊರಬ | ಸೊರಬ | ಕುಪ್ಪಗಡ್ಡೆ | ಕುಪ್ಪಗಡ್ಡೆ |
| 8975 | ಶಿವಮೊಗ್ಗ | ಸೊರಬ | ಸೊರಬ | ಆನವಟ್ಟಿ | ತತ್ತೂರು |
| 8976 | ಶಿವಮೊಗ್ಗ | ಸೊರಬ | ಸೊರಬ | ಆನವಟ್ಟಿ | ಬಾರಂಗಿ |
| 8977 | ಶಿವಮೊಗ್ಗ | ಸೊರಬ | ಸೊರಬ | ಉಳವಿ | ದೂಗೂರು |
| 8978 | ಶಿವಮೊಗ್ಗ | ಸೊರಬ | ಸೊರಬ | ಕಸಬ | ಉದ್ರಿ |
| 8979 | ಶಿವಮೊಗ್ಗ | ಸೊರಬ | ಸೊರಬ | ಚಂದ್ರಗುತ್ತಿ | ಹಚ್ಚೆ |
| 8980 | ಶಿವಮೊಗ್ಗ | ಸೊರಬ | ಸೊರಬ | ಕಸಬ | ಒಟೂರು |
| 8981 | ಶಿವಮೊಗ್ಗ | ಸೊರಬ | ಸೊರಬ | ಕಸಬ | ಕುದುರಗಣಿ |
| 8982 | ಶಿವಮೊಗ್ಗ | ಸೊರಬ | ಸೊರಬ | ಕುಪ್ಪಗಡ್ಡೆ | ಮೆಳಗಿಕೂರ್ಲಿ |
| 8983 | ಶಿವಮೊಗ್ಗ | ಸೊರಬ | ಸೊರಬ | ಉಳವಿ | ಶಿಗ್ಗಾ |
| 8984 | ಶಿವಮೊಗ್ಗ | ಸೊರಬ | ಸೊರಬ | ಉಳವಿ | ಕಾತುವಳ್ಳಿ |
| 8985 | ಶಿವಮೊಗ್ಗ | ಸೊರಬ | ಸೊರಬ | ಚಂದ್ರಗುತ್ತಿ | ನ್ಯಾರ್ಶಿ |
| 8986 | ಶಿವಮೊಗ್ಗ | ಸೊರಬ | ಸೊರಬ | ಚಂದ್ರಗುತ್ತಿ | ನೆಗವಾಡಿ |
| 8987 | ಶಿವಮೊಗ್ಗ | ಸೊರಬ | ಸೊರಬ | ಚಂದ್ರಗುತ್ತಿ | ಕಮರೂರು |
| 8988 | ಶಿವಮೊಗ್ಗ | ಸೊರಬ | ಸೊರಬ | ಜಡೆ | ತಲಗಡ್ಡೆ |
| 8989 | ಶಿವಮೊಗ್ಗ | ಸೊರಬ | ಸೊರಬ | ಜಡೆ | ಸಾಬರ |
| 8990 | ಶಿವಮೊಗ್ಗ | ಸೊರಬ | ಸೊರಬ | ಜಡೆ | ಜಡೆ |
| 8991 | ಶಿವಮೊಗ್ಗ | ಸೊರಬ | ಸೊರಬ | ಜಡೆ | ಶಕುನಹಳ್ಳಿ |
| 8992 | ಶಿವಮೊಗ್ಗ | ಸೊರಬ | ಸೊರಬ | ಜಡೆ | ಬೆಳಗುಲಿ |
| 8993 | ಶಿವಮೊಗ್ಗ | ಸೊರಬ | ಸೊರಬ | ಜಡೆ | ಅರೆತಲಗಡ್ಡೆ |
| 8994 | ಶಿವಮೊಗ್ಗ | ಸೊರಬ | ಸೊರಬ | ಜಡೆ | ಬಂಕವಳ್ಳಿ |
| 8995 | ಶಿವಮೊಗ್ಗ | ಸೊರಬ | ಸೊರಬ | ಜಡೆ | ಆಲಹಳ್ಳಿ |
| 8996 | ಶಿವಮೊಗ್ಗ | ಸೊರಬ | ಸೊರಬ | ಜಡೆ | ಬಂಕಸಾಣ |
| 8997 | ಶಿವಮೊಗ್ಗ | ಸೊರಬ | ಸೊರಬ | ಜಡೆ | ತಲಗುಂದ |
| 8998 | ಶಿವಮೊಗ್ಗ | ಸೊರಬ | ಸೊರಬ | ಕಸಬ | ಹರೂರು |
| 8999 | ಶಿವಮೊಗ್ಗ | ಸೊರಬ | ಸೊರಬ | ಕಸಬ | ಯಲವಳ್ಳಿ |
| 9000 | ಶಿವಮೊಗ್ಗ | ಸೊರಬ | ಸೊರಬ | ಕಸಬ | ಮನೆಮನೆ |
| 9001 | ಶಿವಮೊಗ್ಗ | ಸೊರಬ | ಸೊರಬ | ಕಸಬ | ಮಾವಲಿ |
| 9002 | ಶಿವಮೊಗ್ಗ | ಸೊರಬ | ಸೊರಬ | ಕಸಬ | ಸುತ್ತುಕೋಟೆ |
| 9003 | ಶಿವಮೊಗ್ಗ | ಸೊರಬ | ಸೊರಬ | ಕಸಬ | ಜಿರಲೇಕೊಪ್ಪ |
| 9004 | ಶಿವಮೊಗ್ಗ | ಸೊರಬ | ಸೊರಬ | ಕಸಬ | ಉರುಗನಹಳ್ಳಿ |
| 9005 | ಶಿವಮೊಗ್ಗ | ಸೊರಬ | ಸೊರಬ | ಕಸಬ | ಕೊಡಕಣಿ |
| 9006 | ಶಿವಮೊಗ್ಗ | ಸೊರಬ | ಸೊರಬ | ಕಸಬ | ಚನ್ನಾಪುರ |
| 9007 | ಶಿವಮೊಗ್ಗ | ಸೊರಬ | ಸೊರಬ | ಕಸಬ | ಛತ್ರದಹಳ್ಳಿ |
| 9008 | ಶಿವಮೊಗ್ಗ | ಸೊರಬ | ಸೊರಬ | ಕಸಬ | ಅಂಡಿಗೆ |
| 9009 | ಶಿವಮೊಗ್ಗ | ಸೊರಬ | ಸೊರಬ | ಉಳವಿ | ಮಳಲಗದ್ದೆ |
| 9010 | ಶಿವಮೊಗ್ಗ | ಸೊರಬ | ಸೊರಬ | ಉಳವಿ | ಕುಂಬತ್ತಿ |
| 9011 | ಶಿವಮೊಗ್ಗ | ಸೊರಬ | ಸೊರಬ | ಉಳವಿ | ಬೈರಕೊಪ್ಪ |
| 9012 | ಶಿವಮೊಗ್ಗ | ಸೊರಬ | ಸೊರಬ | ಉಳವಿ | ಚಿಮಣೂರು |
| 9013 | ಶಿವಮೊಗ್ಗ | ಸೊರಬ | ಸೊರಬ | ಉಳವಿ | ಕಪ್ಪಗಳಲೆ |
| 9014 | ಶಿವಮೊಗ್ಗ | ಸೊರಬ | ಸೊರಬ | ಉಳವಿ | ಹೆಗ್ಗೋಡು |
| 9015 | ಶಿವಮೊಗ್ಗ | ಸೊರಬ | ಸೊರಬ | ಉಳವಿ | ಕೋಳಿಸಾಲು |
| 9016 | ಶಿವಮೊಗ್ಗ | ಸೊರಬ | ಸೊರಬ | ಉಳವಿ | ಬಿ.ಸಾಗದ್ದೆ |
| 9017 | ಶಿವಮೊಗ್ಗ | ಸೊರಬ | ಸೊರಬ | ಕಸಬ | ಹಳೇಸೊರಬ |
| 9018 | ಶಿವಮೊಗ್ಗ | ಸೊರಬ | ಸೊರಬ | ಕಸಬ | ಕಂತನಹಳ್ಳಿ |
| 9019 | ಶಿವಮೊಗ್ಗ | ಸೊರಬ | ಸೊರಬ | ಕಸಬ | ಉಪ್ಪಳ್ಳಿ |
| 9020 | ಶಿವಮೊಗ್ಗ | ಸೊರಬ | ಸೊರಬ | ಕಸಬ | ಯಲಸಿ |
| 9021 | ಶಿವಮೊಗ್ಗ | ಸೊರಬ | ಸೊರಬ | ಕಸಬ | ನಡಹಳ್ಳಿ |
| 9022 | ಶಿವಮೊಗ್ಗ | ಸೊರಬ | ಸೊರಬ | ಕಸಬ | ಕೋಲಗುಣಸಿ |
| 9023 | ಶಿವಮೊಗ್ಗ | ಸೊರಬ | ಸೊರಬ | ಕಸಬ | ತವರೆತೆಪ್ಪೆ |
| 9024 | ಶಿವಮೊಗ್ಗ | ಸೊರಬ | ಸೊರಬ | ಕಸಬ | ಮೂಗೂರು |

# ಕರ್ನಾಟಕ ವಿಧಾನಸಭೆ

| | | |
|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 591 |
| 2 | ಸದಸ್ಯರ ಹೆಸರು | ಶ್ರೀ ವಿ.ಮುನಿಯಪ್ಪ (ಶಿಡ್ಲಘಟ್ಟ) |
| 3 | ವಿಷಯ | ಪೋಡಿ ದುರಸ್ಥಿ |
| 4 | ಉತ್ತರಿಸಬೇಕಾದ ದಿನಾಂಕ | 10.12.2018 |
| 5 | ಉತ್ತರಿಸುವ ಸಚಿವರು | ಕಂದಾಯ ಹಾಗೂ ಕೌಶಲ್ಯ ಅಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರೈತರ ಜಮೀನುಗಳ ಪಹಣಿಯಲ್ಲಿ (p) ಪೈಕಿ ನಂಬರ್ ನಮೂದಿಸುತ್ತಿರುವುದರಿಂದ ರೈತರಿಗೆ ಆಗುತ್ತಿರುವ ತೊಂದರೆಗಳು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಹುತೇಕ ಪೈಕಿ ಪಹಣಿಗಳು ದರಖಾಸ್ತಿನಲ್ಲಿ ಮಂಜೂರಾಗಿರುವ ಜಮೀನುಗಳಾಗಿರುತ್ತವೆ. ಸದರಿ ಸರ್ವೆ ನಂಬರುಗಳ ಆಕಾರ್ ಬಂದ್ ಭೂಮಾಪನಾ ಇಲಾಖೆಯಿಂದ ದುರಸ್ಥಿಯಾದ ನಂತರ ಹೊಸ ನಂಬರುಗಳನ್ನು ಭೂಮಿ ತಂತ್ರಾಂಶದಲ್ಲಿ ಅಳವಡಿಸಬೇಕಾಗಿರುತ್ತದೆ. ಆಕಾರ್ ಬಂದ್ ದಾಖಲೆಯನ್ನು ಆಧರಿಸಿ ಕಂದಾಯ ಇಲಾಖೆಯಿಂದ ಪಹಣಿಗಳನ್ನು ನಿರ್ವಹಿಸಬೇಕಾಗಿರುತ್ತದೆ.<br>ಆಕಾರ್ ಬಂದ್ ಆಧಾರವಿಲ್ಲದೆ ಸೃಜಿಸಿರುವ ಸರ್ವೆ ನಂಬರ್ ಗಳ ಪಹಣಿಗಳು ಪೈಕಿ ನಂಬರ್ ಆಗಿದ್ದು, ಇದರಿಂದ 11-ಇ ನಕ್ಷೆ ಪಡೆಯಲು ಹಾಗೂ ಜಮೀನಿಗೆ ಸಂಬಂಧಿಸಿದಂತೆ ವ್ಯವಹರಿಸಲು ರೈತರಿಗೆ ತೊಂದರೆಯಾಗುತ್ತಿದೆ. |
| ಆ) | ಹಾಗಿದ್ದಲ್ಲಿ, ಸರ್ಕಾರ ಮುಂದಿನ ದಿನಗಳಲ್ಲಿ ಪೈಕಿ ಎಂದು ತೆಗೆದು ದುರಸ್ಥಿ ಮಾಡಲು ಕೈಗೊಳ್ಳಲಿರುವ ಕ್ರಮಗಳೇನು; | ಪ್ರಸ್ತುತ ತಂತ್ರಾಂಶದಲ್ಲಿ ಪೈಕಿ ನಂಬರ್ ಗಳನ್ನು ಮೂಲ ನಂಬರ್ ನಲ್ಲಿ ಒಟ್ಟುಗೂಡಿಸಿ ನಂತರ ಪೋಡಿ ಮಾಡುವ ಮೂಲಕ ಆಕಾರ್ ಬಂದ್ ಆಧಾರದಂತೆ ಪಹಣಿ ಸೃಜಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.<br>ದರಖಾಸ್ತು ಜಮೀನುಗಳಿಗೆ ಸಂಬಂಧಪಟ್ಟಂತೆ ಕಂದಾಯ ಇಲಾಖೆಯಿಂದ ಅನುಬಂಧ-1 ರಿಂದ 5 ಅನ್ನು ಸಿದ್ಧಪಡಿಸಿ ಭೂಮಾಪನಾ ಇಲಾಖೆಗೆ ಕಳುಹಿಸಿ ಅನುಬಂಧ-6 ರಿಂದ 10 ಅನ್ನು ಸದರಿ ಇಲಾಖೆಯಿಂದ ಪೂರ್ಣಗೊಳಿಸಿ ಸಕ್ಷಮ ಪ್ರಾಧಿಕಾರದಿಂದ ಆದೇಶ ಪಡೆದ ನಂತರ ಆಕಾರ್ ಬಂದ್ ದುರಸ್ಥಿಯಂತೆ ಪಹಣಿ ಇಂಡೀಕರಿಸುವ ಕ್ರಮ ಕೈಗೊಳ್ಳಲಾಗುತ್ತಿದೆ. |
| ಇ) | ದುರಸ್ಥಿ ಮಾಡಿ ಪೋಡಿ ಮಾಡಲು ಇನ್ನು ಎಷ್ಟು ಸಮಯ ಬೇಕಾಗುತ್ತದೆ. | ಪೈಕಿ ಸರ್ವೆ ನಂಬರುಗಳ ಪಹಣಿಗಳನ್ನು ಒಟ್ಟುಗೂಡಿಸಿ, ಪಹಣಿಯ ಕಾಲಂ 9 ರಲ್ಲಿ ಎಲ್ಲಾ ಹಕ್ಕುದಾರರಿಗೆ ವಿಸ್ತೀರ್ಣದೊಂದಿಗೆ ನಮೂದಿಸಿ, ಆಕಾರಬಂದ ವಿಸ್ತೀರ್ಣಕ್ಕೆ ತಾಳೆ ಮಾಡಿ ಭೂಮಾಪನ ಶಾಖೆಗೆ ನೀಡಿದಲ್ಲಿ ಖಾಸಗಿ ಜಮೀನುಗಳಲ್ಲಿ ವಿಳಂಬವಿಲ್ಲದೆ, ಮತ್ತು ಭೂಮಂಜೂರಿ ಪ್ರಕರಣಗಳಲ್ಲಿ ಸುತ್ತೋಲೆ ಸಂ.ತಾಂತ್ರಿಕ. ದರಖಾಸ್ತು.ಪೋಡಿ. ಆಂದೋಲನ.40/2008-09 ದಿನಾಂಕ 20/10/2010 ಮತ್ತು ಸುತ್ತೋಲೆ ಸಂ.ಕಂಇ 283 ಭೂದಾಸ 2010 ದಿನಾಂಕ 23-11-2010 ಗಳ ಮೇರೆಗೆ ಆದ್ಯತೆ ನೀಡಿ ದುರಸ್ತಿ ಕಾರ್ಯ ಕೈಗೊಳ್ಳಲಾಗುವುದು. |

| | | |
|---|---|---|
| ಊ) | ಶಿಡ್ಲಘಟ್ಟ ವಿಧಾನಸಭಾ ಕ್ಷೇತ್ರದಲ್ಲಿ ಇನ್ನು ಎಷ್ಟು ಪೋಡಿ ಮಾಡಿ ದುರಸ್ತಿ ಮಾಡುವ ಕಾರ್ಯ ಬಾಕಿ ಇರುತ್ತದೆ; | ಶಿಡ್ಲಘಟ್ಟ ತಾಲ್ಲೂಕಿನಲ್ಲಿ 12,226 ಬಹುಮಾಲಿಕತ್ವದ ಪಹಣಿಗಳು ಮತ್ತು 9,628 ಪೈಕಿ ಪಹಣಿಗಳು ಒಟ್ಟು 21,854 ಪ್ರಕರಣಗಳು ಪೋಡಿಗಾಗಿ ಬಾಕಿ ಇರುತ್ತದೆ. 327 ಭೂಮಂಜೂರಿ ಪ್ರಕರಣಗಳು ತಾಲ್ಲೂಕು ಕಚೇರಿಯ ದರಖಾಸ್ತು ಶಾಖೆಯಲ್ಲಿ ಹಾಗೂ ಭೂಮಾಪನ ಶಾಖೆಯಲ್ಲಿ 169 ತತ್ಕಾಲ್ ಪೋಡಿ ಪ್ರಕರಣಗಳು ಬಾಕಿ ಇರುತ್ತದೆ. |
| ಉ) | ಪೈಕಿ ಸರ್ವೆ ನಂಬರ್‌ಗಳನ್ನು ಪೋಡಿ ಮಾಡಿ ದುರಸ್ತಿ ಮಾಡಲು ಇರುವ ಮಾನದಂಡಗಳೇನು? | ಪೈಕಿ ಸರ್ವೆ ನಂಬರ್‌ಗಳನ್ನು ಪೋಡಿ ಮಾಡಿ ದುರಸ್ತಿ ಮಾಡಲು ಇರುವ ಮಾನದಂಡಗಳು<br>1) ಆಕಾರಬಂದು ಕ್ಷೇತ್ರ, ಪಹಣಿ ಕ್ಷೇತ್ರಕ್ಕೆ ತಾಳೆಯಿರಬೇಕು.<br>2) ಪಹಣಿಯ ಕಾಲಂ 3 ಮತ್ತು ಕಾಲಂ 9 ತಾಳೆಯಿರಬೇಕು.<br>3) ಭೂಮಂಜೂರಾಗಿರುವ ಜಮೀನುಗಳಲ್ಲಿ ಸುತ್ತೋಲೆ ಸಂ.ತಾಂತ್ರಿಕ.ದರಖಾಸ್ತು.ಪೋಡಿ.ಆಂದೋಲನ.40/2008-09 ದಿನಾಂಕ 20/10/2010 ಮತ್ತು ಸುತ್ತೋಲೆ ಸಂ.ಕಂಇ 283 ಭೂದಾಸ 2010 ದಿನಾಂಕ 23-11-2010 ಗಳ ಪ್ರಕಾರ ಯೋಗ್ಯವಾಗಿರಬೇಕು (ಸುತ್ತೋಲೆಯ ಪ್ರತಿ ಲಗತ್ತಿಸಿದೆ). |

ಕಂಇ 267 ಭೂದಾಅ 2018

**(ಆರ್.ವಿ. ದೇಶಪಾಂಡೆ)**
ಕಂದಾಯ ಹಾಗೂ ಕೌಶಲ್ಯ ಅಭಿವೃದ್ಧಿ, ಉದ್ಯಮಶೀಲತೆ
ಮತ್ತು ಜೀವನೋಪಾಯ ಸಚಿವರು



# ಕರ್ನಾಟಕ ಸರ್ಕಾರ

ಸಂಖ್ಯೆ: ಕಂಇ 283 ಭೂದಾನ 2010.

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ: 23.11.2010.

## ಸುತ್ತೋಲೆ

ವಿಷಯ: ದರಖಾಸ್ತು ಪೋಡಿ ಕಡತಗಳ ವಿಲೇವಾರಿ ಬಗ್ಗೆ.

ಉಲ್ಲೇಖ:
1) ಆಯುಕ್ತರ ಸುತ್ತೋಲೆ ಸಂಖ್ಯೆ:ತಾಂ.ಆ.ಸುತ್ತೋಲೆ.1/08-09, ದಿ:19.6.2008
2) ಸರ್ಕಾರದ ಸುತ್ತೋಲೆ ಸಂಖ್ಯೆ:ಕಂಇ 197 ಭೂದಾನ 2008, ದಿ:18.8.2008
3) ಆಯುಕ್ತರ ಸುತ್ತೋಲೆ ಸಂಖ್ಯೆ:ತಾಂ.ದರಖಾಸ್ತು.ಪೋ.ಅಂ.40/2008-09, ದಿ:20.10.2008
4) ಆಯುಕ್ತರ ಸುತ್ತೋಲೆ ಸಂಖ್ಯೆ:ತಾಂ.ದರಖಾಸ್ತು.ಪೋ.ಅಂ.40ಎ/2008-09, ದಿ:3.1.2009
5) ಆಯುಕ್ತರ ಸುತ್ತೋಲೆ ಸಂಖ್ಯೆ:ತಾಂ.ದರಖಾಸ್ತು.ಪೋ.ಅಂ.40ಎ/2008-09, ದಿ:13.1.2009.
6) ಆಯುಕ್ತರ ಸುತ್ತೋಲೆ ಸಂಖ್ಯೆ:ತಾಂ.ದರಖಾಸ್ತು.ಪೋ.ಅಂ.40/2008-09, ದಿ:12.3.2009
7) ಆಯುಕ್ತರ ಸುತ್ತೋಲೆ ಸಂಖ್ಯೆ:ತಾಂ.ಆಡಳಿತ.ಸುತ್ತೋಲೆ.13/2008-09, ದಿ:16.3.2009.
8) ಆಯುಕ್ತರ ಸುತ್ತೋಲೆ ಸಂಖ್ಯೆ:ತಾಂ.ಆಡಳಿತ.ಸುತ್ತೋಲೆ.14/2008-09, ದಿ:17.3.2009
9) ಆಯುಕ್ತರ ಸುತ್ತೋಲೆ ಸಂಖ್ಯೆ:ತಾಂ.ಆಡಳಿತ.ಸುತ್ತೋಲೆ 2/2009-10, ದಿ:6.5.2009
10) ಆಯುಕ್ತರ ಸುತ್ತೋಲೆ ಸಂಖ್ಯೆ:ತಾಂ.ಆಡಳಿತ.ಸುತ್ತೋಲೆ.3/2009-10, ದಿ:15.6.2009
11) ಆಯುಕ್ತರ ಸುತ್ತೋಲೆ ಸಂಖ್ಯೆ:ತಾಂ.ದ.ಪೋ.ಅಂ.40/2008-09, ದಿ:7.7.2009
12) ಸರ್ಕಾರದ ಸುತ್ತೋಲೆ ಸಂಖ್ಯೆ:ಕಂಇ 74 ಎಲ್‌ಜಿಪಿ 2009, ದಿ:6.8.2009
13) ಸರ್ಕಾರದ ಸುತ್ತೋಲೆ ಸಂಖ್ಯೆ:ಕಂಇ 74 ಎಲ್‌ಜಿಪಿ 2009, ದಿ:17.9.2009
14) ಆಯುಕ್ತರ ಸುತ್ತೋಲೆ ಸಂಖ್ಯೆ:ತಾಂ.ಆಡಳಿತ.ಸುತ್ತೋಲೆ 26/2009-10, ದಿ.14.12.2009
15) ಆಯುಕ್ತರ ಸುತ್ತೋಲೆ ಸಂಖ್ಯೆ:ತಾಂ ಆಡಳಿತ ಸುತ್ತೋಲೆ 29/2009-10, ದಿ:25.1.2010.

ರಾಜ್ಯದಲ್ಲಿ ದರಖಾಸ್ತು ಪೋಡಿ ಕಡತಗಳ ವಿಲೇವಾರಿಗೆ ವಿಶೇಷ ಆಂದೋಲನವನ್ನು 2008 ರಲ್ಲಿ ಕೈಗೆತ್ತಿಕೊಳ್ಳಲಾಗಿದೆ. ಈ ಬಗ್ಗೆ ಸರ್ಕಾರದಿಂದ, ಭೂಮಾಪನ ಆಯುಕ್ತರಿಂದ ಮತ್ತು ವ್ಯವಸ್ಥಾಪಕ ನಿರ್ದೇಶಕರು, ಸಾರ್ವಜನಿಕ ಜಮೀನುಗಳ ನಿಗಮ ಇವರಿಂದ ಉಲ್ಲೇಖದಲ್ಲಿ ನಮೂದಿಸಿರುವಂತೆ ಹಲವು ಸುತ್ತೋಲೆಗಳನ್ನು ಹೊರಡಿಸಲಾಗಿದೆ.

ಈ ಸುತ್ತೋಲೆಗಳನ್ವಯ ದರಖಾಸ್ತು ಪೋಡಿ ಕಡತಗಳ ವಿಲೇವಾರಿಯಲ್ಲಿ ಕಳೆದ 2 ವರ್ಷಗಳಲ್ಲಿ ನಿರೀಕ್ಷಿತ ಮಟ್ಟದಲ್ಲಿ ಪ್ರಗತಿ ಆಗದಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. ಈ ಸಂಬಂಧದಲ್ಲಿ ಭೂಮಾಪನ ಆಯುಕ್ತರು ಹೊರಡಿಸಿದ ಸುತ್ತೋಲೆಯಲ್ಲಿ ಅಳವಡಿಸಲಾದ ನಮೂನೆ 1 ರಿಂದ 5 ಅನ್ನು ಭರ್ತಿ ಮಾಡಿ ಉಪ ವಿಭಾಗಾಧಿಕಾರಿಗಳು ಮತ್ತು ಭೂಮಾಪನ ಉಪ ನಿರ್ದೇಶಕರಿಂದ ದೃಢೀಕರಣವಾದ ನಂತರವೇ ದರಖಾಸ್ತು ಪೋಡಿ ಪ್ರಕರಣಗಳ ಅಳತೆ ಮತ್ತು ದುರಸ್ತಿ ಕೆಲಸವನ್ನು ಕೈಗೊಳ್ಳಬೇಕೆಂದು ನಿರ್ದೇಶನ ನೀಡಲಾಗಿರುತ್ತದೆ

ಸರ್ಕಾರದಿಂದ ಹಾಗೂ ಆಯುಕ್ತರಿಂದ ನೀಡಲಾಗಿರುವ ಸುತ್ತೋಲೆಗಳಲ್ಲಿ ನಮೂದಿಸಿರುವ ಎಲ್ಲಾ ಸೂಚನೆಗಳನ್ನು ಅನುಸರಿಸಿ ಅಳತೆ ಕಾರ್ಯ ನಿರ್ವಹಿಸುವಲ್ಲಿ ವಿಳಂಬವಾಗುತ್ತಿದೆ ಎಂಬ ಬಗ್ಗೆ ಸಾರ್ವಜನಿಕರಿಂದ ಹಾಗೂ ಜನಪ್ರತಿನಿಧಿಗಳಿಂದ ದೂರುಗಳು ಸ್ವೀಕೃತವಾಗಿರುತ್ತವೆ. ಇದಲ್ಲದೇ, ತುರ್ತಾಗಿ ಜಮೀನು ಮಾರಬೇಕಾದಂತಹ ಕೆಲವು ಸಂದರ್ಭಗಳಲ್ಲಿ ಅಳತ ಕಾರ್ಯ ವಿಳಂಬವಾದಲ್ಲಿ ಮಾರಾಟ ಪ್ರಕ್ರಿಯೆ ಮುಂದುವರಿಸಲು ಅನಾನುಕೂಲ ಉಂಟಾಗಿರುವುದನ್ನು ಸರ್ಕಾರದ ಗಮನಕ್ಕೆ ತಂದಿರುತ್ತಾರೆ. ಇಂತಹ ತೊಂದರೆಗಳನ್ನು ನಿವಾರಿಸಲು ಸರ್ಕಾರ / ಆಯುಕ್ತರು ಹೊರಡಿಸಿರುವ ಸುತ್ತೋಲೆಗಳಲ್ಲಿ ನೀಡಿರುವ ನಿರ್ದೇಶನಗಳನ್ನು ತುರ್ತು ಅಳತೆ ಕಾರ್ಯ ನಿರ್ವಹಿಸಬೇಕಾದ ಅನಿವಾರ್ಯ ಪ್ರಸಂಗಗಳಲ್ಲಿ ವಿನಾಯಿತಿ ನೀಡಬೇಕಾದ ಅವಶ್ಯಕತೆ ಇರುವುದನ್ನು ಸರ್ಕಾರ ಮನಗಂಡಿರುತ್ತದೆ.

ಈ ಸಂಬಂಧದಲ್ಲಿ ಕಂದಾಯ ಇಲಾಖೆ ಮತ್ತು ಭೂಮಾಪನ ಇಲಾಖೆಯ ಉನ್ನತ ಮಟ್ಟದ ಅಧಿಕಾರಿಗಳೊಂದಿಗೆ ಚರ್ಚಿಸಲಾಗಿದ್ದು, ದರಖಾಸ್ತು ಪೋಡಿ ಕಡತಗಳ ವಿಲೇವಾರಿಗೆ ಈಗಾಗಲೇ ನೀಡಲಾಗಿರುವ ಸೂಚನೆಗಳನ್ವಯ ಅಳತ ಕಾರ್ಯಗಳನ್ನು ಮುಂದುವರಿಸಿಕೊಂಡು ಹೋಗುವ ಅವಶ್ಯಕತೆ ಇದೆ ಎಂಬ ಬಗ್ಗೆ, ಆದರೆ ಕೆಲವು ತುರ್ತು ಮತ್ತು ಅನಿವಾರ್ಯ ಪ್ರಸಂಗಗಳಲ್ಲಿ ಮಾತ್ರ ಏಕವ್ಯಕ್ತಿ ಕೋರಿಕೆ ಪ್ರಕರಣಗಳಲ್ಲಿ ಪ್ರತ್ಯೇಕವಾಗಿ ಅಳತೆ ಮಾಡಲು ಅವಕಾಶ ಕಲ್ಪಿಸುವುದು ಸೂಕ್ತವೆಂದು ಅಭಿಪ್ರಾಯಕ್ಕೆ ಬರಲಾಗಿದೆ.

ಈ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಹಾಗೂ ಸರ್ವೆ ನಂಬರಿನ ಪೂರ್ಣ-ವಿಸ್ತೀರ್ಣವನ್ನು ಅಳತೆ ಮಾಡಿ ದುರಸ್ತಿಪಡಿಸಲು ಬಹಳ ಕಾಲಾವಕಾಶ ಬೇಕಾಗಬಹುದಾದ ಪ್ರಕರಣಗಳಲ್ಲಿ ಏಕವ್ಯಕ್ತಿ ಕೋರಿಕೆ ಅನುಸಾರ ತುರ್ತಾಗಿ ಅಳತೆ ಮಾಡುವ ಅನಿವಾರ್ಯತೆ ಕಂಡು ಬಂದಲ್ಲಿ ಮಾತ್ರ ಜಿಲ್ಲಾಧಿಕಾರಿಗಳ ಪೂರ್ವಾನುಮತಿ ಪಡೆದು ಅಳತೆ ಕಾರ್ಯ ನಿರ್ವಹಿಸಿ, ದುರಸ್ತಿಪಡಿಸಿ ನಂತರ ಮ್ಯುಟೇಷನ್ ಪೂರ್ವ ನಕ್ಷೆ ವಿತರಿಸಬಹುದೆಂದು ಸೂಚಿಸಲಾಗಿದೆ. ಉಳಿದಂತೆ ಈ ಸಂಬಂಧದಲ್ಲಿ ಈಗಾಗಲೇ ನೀಡಲಾಗಿರುವ ನಿರ್ದೇಶನಗಳು ಜಾರಿಯಲ್ಲಿರುತ್ತವೆಯೆಂದು ಸ್ಪಷ್ಟಪಡಿಸಿದೆ.

(ವಿ.ಮಧು)
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಕಂದಾಯ ಇಲಾಖೆ

ಇವರಿಗೆ:-

1) ಎಲ್ಲಾ ಪ್ರಾದೇಶಿಕ ಆಯುಕ್ತರುಗಳು
2) ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು

ಸಂಖ್ಯೆ: ಕಂ.ದ.ಮೋ.ಆಂದೋಲನ.40/2008-2009. ದಿನಾಂಕ: 27.11.2010.

ಪ್ರತಿಯನ್ನು:

1) ಪ್ರಾಚಾರ್ಯರು, ಭೂಮಾಪನ ತರಬೇತಿ ಸಂಸ್ಥೆ, ಮೈಸೂರು / ಗುಲ್ಬರ್ಗಾ ರವರಿಗೆ
2) ಎಲ್ಲಾ ಜಿಲ್ಲಾದಿಕಾರಿಗಳಿಗೆ.
3) ಎಲ್ಲಾ ಜಿಲ್ಲಾಧಿಕಾರಿಗಳ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಭೂದಾಖಲೆಗಳ ಉಪ ನಿರ್ದೇಶಕರುಗಳಿಗೆ
4) ಎಲ್ಲಾ ಉಪವಿಭಾಗಾಧಿಕಾರಿಗಳಿಗೆ
5) ಎಲ್ಲಾ ತಹಶೀಲ್ದಾರ್‌ಗಳಿಗೆ
6) ಕೇಂದ್ರ ಕಛೇರಿಯ ಎಲ್ಲಾ ಅಧಿಕಾರಿಗಳಿಗೆ/ ತಾಂತ್ರಿಕ ಶಾಖೆಗೆ
7) ಅಧ್ಯಕ್ಷರು,ಕರ್ನಾಟಕ ರಾಜ್ಯ ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಕಾರ್ಯನಿರ್ವಾಹಕ ಸಂಘ, ಬೆಂಗಳೂರು
8) ಅಧ್ಯಕ್ಷರು, ಕರ್ನಾಟಕ ರಾಜ್ಯದ ಪರವಾನಗಿ ಭೂಮಾಪಕರ ಸಂಘ, ಮಹಾವೀರ ಕಾಂಪ್ಲೆಕ್ಸ್, ಕೆ.ಜಿ. ರೋಡ್, ಬೆಂಗಳೂರು

(ಪಿ.ಬಸವರಾಜು)
ಪ್ರಭಾರ ಭೂದಾಖಲೆಗಳ ಜಂಟಿ ನಿರ್ದೇಶಕರು(ವಿ ಮತ್ತು ತ)
ಆಯುಕ್ತರ ಕಛೇರಿ,
ಭೂಮಾಪನ ಕಂದಾಯ ವ್ಯವಸ್ಥೆ ಮತ್ತು
ಭೂದಾಖಲೆಗಳು, ಬೆಂಗಳೂರು.

ಮತ್ತು ಅವುಗಳಲ್ಲಿನ ಒತ್ತುವರಿಗಳ ಬಗ್ಗೆ ಸೂಚ್ಯ ನಕ್ಷೆ ತಯಾರಿಕೆ.

ಈ ಕೆಲಸಗಳನ್ನು ಕೆಳಕಂಡ ಮೂರು ಹಂತಗಳಲ್ಲಿ ನಿರ್ವಹಿಸಬೇಕಾಗಿರುತ್ತದೆ.

1. ಪೂರ್ವಸಿದ್ಧತೆ ಕೆಲಸ

2. ಭೂಮಾಪಕರಿಂದ ಅಳತೆ ಕೆಲಸ.

3. ಭೂಮಾಪನ ಮತ್ತು ಕಂದಾಯ ದಾಖಲೆಗಳ ತಯಾರಿಕೆ ಮತ್ತು ಅಧಿಕೃತ ದಾಖಲೆ ಸಿದ್ಧಪಡಿಸುವ ಮೂಲಕ ಅಂತಿಮಗೊಳಿಸುವಿಕೆ.

1) ಪೂರ್ವಸಿದ್ಧತೆ ಕೆಲಸ:-

ಅ) ತಹಸೀಲ್ದಾರರು ವಿಶೇಷ ಆಂದೋಲನದ ಸಲುವಾಗಿ ಶಿರಸ್ತೇದಾರರು, ಕಂದಾಯ ನಿರೀಕ್ಷಕರು, ಗ್ರಾಮ ಲೆಕ್ಕಾಧಿಕಾರಿಗಳು ಮತ್ತು ಭೂಮಂಜೂರಾತಿ ಕೆಲಸವನ್ನು ನಿರ್ವಹಿಸುವ ವಿಷಯ ನಿರ್ವಾಹಕರೊಂದಿಗೆ ಒಂದು ಪ್ರತ್ಯೇಕ ತಂಡವನ್ನು ಕೂಡಲೇ ರಚಿಸುತ್ತಾರೆ.

ಬ) ನಿಗದಿತ ನಮೂನೆಯಲ್ಲಿ ಅಗತ್ಯವಿರುವ ಮಾಹಿತಿಯನ್ನು ಈ ಕೆಳಕಂಡ ವಹಿಗಳಿಂದ ಪಡೆದು ಭರ್ತಿ ಮಾಡತಕ್ಕದ್ದು.

- ಭೂಮಂಜೂರಾತಿ ನಡವಳಿಗಳ ವಹಿ
- ಭೂಮಂಜೂರಾತಿ ವಹಿ
- ಸಾಗುವಳಿ ಚೀಟಿ ವಿತರಣಾ ವಹಿ
- ಮ್ಯುಟೇಷನ್ ವಹಿ
- ಭೂಮಂಜೂರಾತಿ ವಿಷಯ ನಿರ್ವಾಹಕರ ವಹಿ
- "ಭೂಮಿ" ಕೋಶದಿಂದ ಅಥವಾ ಶಾಖೆಯಿಂದ ಪಡೆದ ಪಹಣಿ ಪತ್ರಿಕೆಗಳು

ಭೂಮಂಜೂರಾತಿ ವಿಷಯ ನಿರ್ವಾಹಕರು, ಗ್ರಾಮ ಲೆಕ್ಕಾಧಿಕಾರಿಗಳು ಮತ್ತು ಕಂದಾಯ ನಿರೀಕ್ಷಕರು ಸರ್ವೆ ನಂಬರ್ ಮತ್ತು ಗ್ರಾಮವಾರು ಪ್ರಕರಣಗಳ ಪಟ್ಟಿ ಮಾಡಿ ಅವಶ್ಯಕ ವಿವರಗಳನ್ನು ಕ್ರೋಢೀಕರಿಸುವುದು. ವಿಶೇಷ ಆಂದೋಲನಕ್ಕಾಗಿ ಆಯ್ಕೆ ಮಾಡಲಾದ 52 ತಾಲ್ಲೂಕುಗಳಲ್ಲಿ 3 ರಿಂದ 4 ಗ್ರಾಮಗಳ ಮಾಹಿತಿಯನ್ನು ತಯಾರಿಸಿದ ಕೂಡಲೇ ದಾಖಲೆಗಳನ್ನು ಭೂಮಾಪಕರಿಗೆ ಅಳತೆಗೆ ನೀಡುವುದು. ಹಾಗೆಯೇ ಹಂತ ಹಂತವಾಗಿ ಪ್ರತಿ 3 ರಿಂದ 4 ಗ್ರಾಮಗಳ ಮಾಹಿತಿಗಳನ್ನು ತಯಾರಿಸಿ ಭೂಮಾಪಕರಿಗೆ ನೀಡುವುದು. ಇದರಿಂದ ಭೂಮಾಪಕರು ಒಂದು ತಾಲ್ಲೂಕಿನ ಪೂರ್ವಸಿದ್ಧತೆ ಪೂರ್ಣವಾಗಿ ಸಾಧ್ಯವಾಗುವವರೆಗೂ ಕಾಯುವ ಕೂಡಲೇ ಕೆಲಸವನ್ನು ಪ್ರಾರಂಭಿಸಬಹುದು. ಮೊದಲ ಹಂತದ 52 ತಾಲ್ಲೂಕುಗಳ ಕೆಲಸ ಪೂರ್ಣಗೊಂಡ ನಂತರ ಅದೇ ಉಪ ವಿಭಾಗದ ಇನ್ನುಳಿದ ತಾಲ್ಲೂಕುಗಳಲ್ಲಿ ಈ ವಿಶೇಷ ಆಂದೋಲನ ಪ್ರಾರಂಭಿಸುವುದರಿಂದ ನಂತರದ ಹಂತಗಳಲ್ಲಿ ಆಯ್ಕೆಯಾಗುವ ತಾಲ್ಲೂಕುಗಳ

ಸಿ) ಭೂಮಂಜೂರಾತಿ ಪ್ರಕರಣಗಳ ಹಂತದ ಬಗ್ಗೆ ಅಂದರೆ ಭೂಮಂಜೂರಾತಿ ಆಗಿರುವ, ಭೂಮಂಜೂರಾತಿಗೆ ಬಾಕಿ ಇರುವ, ರದ್ದಾದ ಭೂಮಂಜೂರಾತಿ ಪ್ರಕರಣಗಳು, ರದ್ದತಿಗೆ ಬಾಕಿ ಇರುವ ಪ್ರಕರಣಗಳು ಮತ್ತು ಇತರ ಕಾರಣಕ್ಕೆ ಬಾಕಿ ಇರುವ ಪ್ರಕರಣಗಳ (ಕಾರಣಗಳನ್ನು ನೀಡುವುದು) ಮಾಹಿತಿಯನ್ನು ಒದಗಿಸುವುದು.

೨. ಭೂಸ್ವಾಧೀನ ವಿಷಯ ನಿರ್ವಾಹಕರು:-

ಎ) ಸರ್ಕಾರಿ ಸರ್ವೆ ನಂಬರುಗಳಲ್ಲಿ ಭೂಸ್ವಾಧೀನ ನಡವಳಿಕೆಗಳು ಆಗಿರುವ, ಅಂತಿಮ ಅಧಿಸೂಚನೆಯಾಗಿರುವ ಮತ್ತು ಪರಿಹಾರ ಧನ ನೀಡಿರುವಂತಹ ಸರ್ವೆ ನಂಬರುಗಳ ಪಟ್ಟಿ ತಯಾರಿಸುವುದು

ಬಿ) ಮೇಲೆ ತಿಳಿಸಿದಂತೆ ತಯಾರಿಸಿರುವ ಪಟ್ಟಿ ಮತ್ತು ಕಡತಗಳನ್ನು ಗ್ರಾಮ ಲೆಕ್ಕಾಧಿಕಾರಿಗಳಿಗೆ ನೀಡುವುದು

ಸಿ) ಭೂಸ್ವಾಧೀನ ಪ್ರಕ್ರಿಯೆಯು ಪ್ರಗತಿಯಲ್ಲಿರುವ ಪ್ರಕರಣಗಳ ಬಗ್ಗೆ ಮಾಹಿತಿ ಒದಗಿಸುವುದು

೩ ಕಂದಾಯ ನಿರೀಕ್ಷಕರು ಮತ್ತು ಗ್ರಾಮ ಲೆಕ್ಕಾಧಿಕಾರಿಗಳು:-

ಎ) ಗ್ರಾಮವಾರು ಮತ್ತು ಸರ್ವೆ ನಂಬರ್ ವಾರು ಸಂಬಂಧಿಸಿದ ಮಾಹಿತಿಯನ್ನು ನಿಗದಿತ ನಮೂನೆಯಲ್ಲಿ ಭರ್ತಿ ಮಾಡುವುದು.

ಬಿ) ಸರ್ಕಾರಿ ಸರ್ವೆ ನಂಬರುಗಳನ್ನು ಭೂಸ್ವಾಧೀನವಾದಲ್ಲಿ ನಿಗದಿತ ನಮೂನೆಯಲ್ಲಿ ಅಂತಹ ಸರ್ವೆ ನಂಬರುಗಳ ಪಟ್ಟಿ ಮಾಡುವುದು.

ಸಿ) ಮೊದಲನೆಯ ಹಂತದಲ್ಲಿ ಆಯ್ಕೆ ಮಾಡಲಾದ 52 ತಾಲ್ಲೂಕುಗಳಲ್ಲಿ 3 ರಿಂದ 4 ಗ್ರಾಮಗಳ ಮಾಹಿತಿಯನ್ನು ತಯಾರಿಸಿದ ಕೂಡಲೇ ದಾಖಲೆಗಳನ್ನು ಭೂಮಾಪಕರಿಗೆ ಅಳತೆಗೆ ನೀಡುವುದು. ಹಾಗೆಯೇ ಪ್ರತಿ 4 ರಿಂದ 5 ಗ್ರಾಮಗಳ ಮಾಹಿತಿಗಳನ್ನು ತಯಾರಿಸಿ ಭೂಮಾಪಕರಿಗೆ ನೀಡುವುದು. ಇದರಿಂದ ಭೂಮಾಪಕರು ಒಂದು ತಾಲ್ಲೂಕು ಪೂರ್ತಿಯಾಗುವ ತನಕ ಕಾಯದೆ ಕೂಡಲೇ ಕೆಲಸವನ್ನು ಪ್ರಾರಂಭಿಸಬಹುದು.

ಡಿ) ಇನ್ನುಳಿದ ಹಂತಗಳಲ್ಲಿ ಆಯ್ಕೆಯಾದ ತಾಲ್ಲೂಕುಗಳ ಸಂಪೂರ್ಣ ಮಾಹಿತಿಯನ್ನು 1 ರಿಂದ 2 ತಿಂಗಳೊಳಗಾಗಿ ತಯಾರಿಸುವುದು.

ಇ) ಭರ್ತಿ ಮಾಡಿರುವ ನಮೂನೆ ಮತ್ತು ಅಗತ್ಯ ದಾಖಲೆಗಳಾದ ಅಧಿಕೃತ ಜ್ಞಾಪನ, ಸಾಗುವಳಿ ಚೀಟಿ ಮತ್ತು ಟಿಪ್ಪಣಿ ನಕ್ಷೆಗಳನ್ನು ಭೂಮಾಪಕರಿಗೆ ಅಳತೆಗೆ ನೀಡುವುದು.

ಎಫ್) ಪಹಣಿ ಮತ್ತು ಆಕಾರ ಬಂದ್ ನಲ್ಲಿ ನಮೂದಿಸಿರುವ ಪ್ರತಿಯೊಂದು ಸರ್ಕಾರಿ ನಂಬರುಗಳ ವಿಸ್ತೀರ್ಣಗಳನ್ನು (ಪೈಕಿ ನಂಬರುಗಳ ವಿಸ್ತೀರ್ಣಗಳನ್ನು ಸೇರಿದಂತೆ) ತಾಳೆ ಮಾಡುವುದು

ಜಿ) ಹೆಚ್ಚುವರಿ ವಿಸ್ತೀರ್ಣವನ್ನು ಮಂಜೂರು ಮಾಡಿರುವ ಪ್ರಕರಣಗಳನ್ನು ಗುರುತಿಸಿ ಅವುಗಳ ಬಗ್ಗೆ ತಹಸೀಲ್ದಾರ್ ರವರಿಗೆ ಅಗತ್ಯ ಕ್ರಮಕ್ಕಾಗಿ ವರದಿ ಸಲ್ಲಿಸುವುದು.

ಹೆಚ್) ಅಗತ್ಯವಿದ್ದಲ್ಲಿ ಅಡವಿ ಭೂಮಾಪಕರೊಂದಿಗೆ ಮಂಜೂರಿದಾರರನ್ನು ಗುರುತಿಸಲು ಸಹಕರಿಸುವುದು.

ಐ) ಗೋಮಾಳ ಜಮೀನುಗಳ ಹೊರತಾಗಿ ಇನ್ನಿತರ ಸರ್ಕಾರಿ ಜಮೀನುಗಳಲ್ಲಿ ಭೂಮಂಜೂರಿ ಆಗಿದ್ದಲ್ಲಿ ಪಹಣಿಯಂತೆ ಅಂತಹ ಸರ್ವೆ ನಂಬರುಗಳ ಗ್ರಾಮವಾರು ಪಟ್ಟಿ ತಯಾರಿಸಿ ಭೂಮಾಪಕರು ಆಕಾರಬಂದಿನಂತೆ ತಯಾರಿಸಿರುವ ಪಟ್ಟಿಯೊಂದಿಗೆ ತಾಳೆ ಮಾಡುವುದು

ಜೆ) ಅಲ್ಲದೆ ಅಂತಹ ಜಮೀನುಗಳ ಬಗ್ಗೆ ವಿವರಗಳನ್ನು ನಿಗದಿತ ನಮೂನೆಯಲ್ಲಿ ಭೂಮಾಪಕರಿಗೆ ಒದಗಿಸುವುದು ಮತ್ತು ಅಗತ್ಯ ದಾಖಲೆಗಳಾದ ಸಾಗುವಳಿ ಚೀಟಿ, ಅಧಿಕೃತ ಜ್ಞಾಪನ, ರೆವಿನ್ಯೂ ನಕ್ಷೆ ಮುಂತಾದವುಗಳನ್ನು ಸಹ ಭೂಮಾಪಕರಿಗೆ ನೀಡುವುದು

<u>ಭೂಮಾಪಕರು:-</u>

ಎ) ಅಡವಿ ಕೆಲಸ ಪಂಚಿಕೆಯಾಗುವ ತನಕ ವಿಶೇಷ ದರಖಾಸ್ತು ಪೋಡಿ ಆಂದೋಲನಕ್ಕೆ ನಿಯೋಜಿಸಿರುವ ಎಲ್ಲಾ ಭೂಮಾಪಕರು ಸಕಾಲದಲ್ಲಿ ಸರ್ಕಾರಿ ಜಮೀನುಗಳ ಸರ್ವೆ ನಂಬರುಗಳನ್ನು ಕಾಲೋಚಿತಗೊಳಿಸುವುದು, ಖರಾಬು ಸರ್ವೆ ನಂಬರುಗಳನ್ನು ಹಾಗೂ ವಿಸ್ತೀರ್ಣವನ್ನು ಆಕಾರಬಂದಿನಂತೆ ಗುರುತಿಸುವುದು ಮುಂತಾದ ಕಛೇರಿ ಕೆಲಸವನ್ನು ನಿರ್ವಹಿಸುವುದು

ಬಿ) ಗೋಮಾಳ ಜಮೀನುಗಳನ್ನು ಹೊರತುಪಡಿಸಿ ಇತರ ಸರ್ಕಾರಿ ಜಮೀನುಗಳಿದ್ದಲ್ಲಿ ಅಂತಹ ಸರ್ವೆ ನಂಬರುಗಳ ಗ್ರಾಮವಾರು ಪಟ್ಟಿಯನ್ನು ತಯಾರಿಸುವುದು ಮತ್ತು ಆಕಾರಬಂದಿನಂತೆ ಇರುವ ವಿಸ್ತೀರ್ಣವನ್ನು ಸಹ ನಮೂದಿಸುವುದು.

ಸಿ) ಸರ್ಕಾರಿ ನಂಬರುಗಳ ಪಕ್ಕದಲ್ಲಿರುವ ಶಿಥಿಲವಾಗಿರುವ / ಲಭ್ಯವಿಲ್ಲದ ಟಿಪ್ಪಣಿಗಳನ್ನು ಜಂಟಿ ನಕ್ಷೆ ತಯಾರಿಸಿ ಪುನರ್ ನಿರ್ಮಾಣ ಮಾಡುವುದು. (ಅಂತಹ ನಂಬರುಗಳ ಕ್ಷೇತ್ರ ಪರಿಶೀಲನೆಯನ್ನು ಸರ್ಕಾರಿ ಜಮೀನುಗಳ ಅಳತೆಗೆ ಹೋದ ಸಂದರ್ಭದಲ್ಲಿ ಮಾಡಬಹುದಾಗಿರುತ್ತದೆ)

ಡಿ) ಎಲ್ಲಾ ಸರ್ಕಾರಿ ಜಮೀನುಗಳ ಜಂಟಿ ನಕ್ಷೆಯನ್ನು ತಯಾರಿಸುವುದು

ಅಡವಿ ಕೆಲಸ ಪ್ರಾರಂಭಿಸಿದ ನಂತರ ಮೂರು ತಂಡಗಳನ್ನು ಕ್ಷೇತ್ರ ಕೆಲಸಕ್ಕೆ ಮತ್ತು ಒಂದು ತಂಡವನ್ನು ಕಛೇರಿ ಕೆಲಸಕ್ಕೆ ನಿಯೋಜಿಸುವುದು. ಕ್ಷೇತ್ರ ಮತ್ತು ಕಛೇರಿ ಭೂಮಾಪಕರ ಕರ್ತವ್ಯಗಳು ಈ ಕೆಳಗಿನಂತಿವೆ.

<u>ಕಛೇರಿ ಭೂಮಾಪಕರು:-</u>

ಎ) ಎಲ್ಲಾ ಅಗತ್ಯ ದಾಖಲೆಗಳಾದ ನಿಗಧಿತ ನಮೂನೆ, ಅಧಿಕೃತ ಜ್ಞಾಪನ, ಸಾಗುವಳಿ ಚೀಟಿ, ರವಿನ್ಯು ನಕ್ಷೆ, ಪಹಣಿ, ಮ್ಯುಟೇಷನ್, ಗೋಮಾಳದ ಅಕ್ಕಪಕ್ಕದ ಹಿಡುವಳಿ ನಂಬರುಗಳ ಟಿಪ್ಪಣಿ, ಜಂಟಿ ನಕ್ಷೆ, ಗ್ರಾಮ ನಕಾಶೆ ಮುಂತಾದವುಗಳನ್ನು ಅಡವಿ ಭೂಮಾಪಕರಿಗೆ ಕ್ಷೇತ್ರ ಕೆಲಸ ಪ್ರಾರಂಭಿಸುವ ಮುನ್ನ ನೀಡುವುದು.

ಬಿ) ನೋಟೀಸುಗಳನ್ನು ತಯಾರಿಸುವುದು.

ಸಿ) ಗೋಮಾಳ ಜಮೀನುಗಳ ಹೊರತಾಗಿ ಇನ್ನಿತರ ಸರ್ಕಾರಿ ಜಮೀನುಗಳಲ್ಲಿ ಇತರೆ ಇಲಾಖೆಯವರು ಸ್ವಾಧೀನದಲ್ಲಿದ್ದರೆ ಅವರಿಗೆ ನೋಟೀಸು ತಯಾರಿಸಿ ಸಂಬಂಧಪಟ್ಟವರು ಅಳತೆ ಸಮಯದಲ್ಲಿ ಹಾಜರಿರುವಂತೆ ನೋಡಿಕೊಳ್ಳುವುದು.

ಡಿ) ಒಬ್ಬ ಕಛೇರಿ ಭೂಮಾಪಕರು ಒಂದು ತಂಡದ 3 ಕ್ಷೇತ್ರ ಭೂಮಾಪಕರಿಂದ ಪಡೆದ ಮಾಹಿತಿಯನ್ನು ಪ್ರತಿದಿನ ಪರಿಶೀಲಿಸುವುದು.

ಇ) ಕ್ಷೇತ್ರ ಭೂಮಾಪಕರು ನಿಗಧಿತ ಗುರಿಯನ್ನು (ಒಂದು ದಿನಕ್ಕೆ 8 ಬ್ಲಾಕುಗಳಂತೆ ಒಬ್ಬ ಭೂಮಾಪಕರು ಅಳತೆ ಮಾಡುವುದು) ಸಾಧಿಸಲು ವಿಫಲರಾದಲ್ಲಿ ಪರ್ಯಾವೇಕ್ಷಕರ ಗಮನಕ್ಕೆ ತರುವುದು.

ಎಫ್) ಒಂದು ದಿನಕ್ಕೆ 24 ಬ್ಲಾಕುಗಳ ಮಾಹಿತಿಯನ್ನು ಪ್ರತಿ ದಿನ ಪರಿಶೀಲಿಸಿ ಲೋಪಗಳೇನಾದರೂ ಇದ್ದಲ್ಲಿ ಅವುಗಳನ್ನು ಅಡವಿ ಭೂಮಾಪಕರಿಂದ ಸರಿಪಡಿಸುವುದು.

ಜಿ) ಒಂದು ಸರ್ವೆ ನಂಬರಿನ ಎಲ್ಲಾ ಬ್ಲಾಕುಗಳ ಅಳತೆಯಾದ ನಂತರ ಅಡವಿ ಭೂಮಾಪಕರು ತಯಾರಿಸಿರುವ ಟಿಪ್ಪಣಿ ಮತ್ತು ಪಕ್ಕಾ ಬುಕ್ಕುಗಳು ಮತ್ತು ಎಲ್ಲಾ ಅಗತ್ಯ ದಾಖಲೆಗಳು ಕ್ರಮಬದ್ಧವಾಗಿದ್ದಲ್ಲಿ, ಪೋಡಿ ಸ್ಕೆಚ್, ಪೋಡಿ ತಃಖ್ತೆ, ಕಮ್ಮಿ ಜಾಸ್ತಿ ಪತ್ರಿಕೆ, ಆಕಾರಬಂದುಗಳನ್ನು ತಯಾರಿಸುವುದು.

ಹೆಚ್) ಗ್ರಾಮ ನಕಾಶೆಗಳಲ್ಲಿ ಹೊಸ ಸರ್ವೆ ನಂಬರುಗಳ ವಿವರಗಳನ್ನು ಅಳವಡಿಸುವುದು.

ಎಫ್) ಅವರು ಭೂಮಾಪಕರು ನಿಗದಿತ ಗುರಿಯನ್ನು ಸಾಧಿಸುವ ಬಗ್ಗೆ ಹಾಗೂ ಕಛೇರಿ ಭೂಮಾಪಕರಿಗೆ ಪ್ರತಿ ದಿನ ಮಾಹಿತಿ ನೀಡುವ ಬಗ್ಗೆ ಪರಿಶೀಲಿಸುವುದು.

ಜಿ) ಅಳತೆ ಅಳತೆಗಳನ್ನು ಆಗಾಗ್ಗೆ ತಪಾಸಣೆ ಮಾಡಿ ಋಜುವಾತು ಗುಣಾಕಾರವನ್ನು ಪರಿಶೀಲಿಸುವುದು.

ಎಚ್) ಸರ್ಕಾರಿ ಜಮೀನುಗಳ ಅಳತೆ ಸಂದರ್ಭದಲ್ಲಿ ಮಂಜೂರಿ ಹಾಗೂ ಅನುಭವದ ವಿಸ್ತೀರ್ಣದಲ್ಲಿ ಯಾವುದೇ ವ್ಯತ್ಯಾಸಗಳು ಕಂಡುಬಂದಲ್ಲಿ ಅಂತಹವುಗಳನ್ನು ಭೂಮಾಪಕರು ತಯಾರಿಸಿರುವ ಹೋಲಿಕೆ ನಕ್ಷೆ ಹಾಗೂ ಟಿಪ್ಪಣಿಗಳನ್ನು ತಹಸೀಲ್ದಾರ್ ರವರಿಗೆ ಅಗತ್ಯ ಕ್ರಮಕ್ಕಾಗಿ ಸಲ್ಲಿಸುವುದು

ಐ) ಕಛೇರಿ ಭೂಮಾಪಕರು ಪರಿಶೀಲಿಸಿರುವ ದಾಖಲೆಗಳನ್ನು ತಪಾಸಣೆ ಮಾಡಿ ಸ್ವೀಕೃತಿಗಾಗಿ ತಹಸೀಲ್ದಾರ್ ರವರಿಗೆ ಸಲ್ಲಿಸುವುದು. ಪೂರಾ ಸರ್ವೆ ನಂಬರನ್ನು ಅಳತೆ ಮಾಡಿ ನಕ್ಷೆ ತಯಾರಿಸಿದ ನಂತರವಷ್ಟೇ ದಾಖಲೆಗಳನ್ನು ತಯಾರಿಸುವಂತೆ ನೋಡಿಕೊಳ್ಳುವುದು

ಜೆ) ಭೂಮಾಪಕರು ಮತ್ತು ರೆವಿನ್ಯೂ ಅಧಿಕಾರಿಗಳ ಮಧ್ಯ ಸಮನ್ವಯ ಸಾಧಿಸುವುದು.

ಕೆ) ಸರ್ಕಾರಿ ಜಮೀನುಗಳಲ್ಲಿ ಆಗಿರುವ ಭೂಸ್ವಾಧೀನದ ಬಗ್ಗೆ ಎಲ್ಲಾ ವಿವರಗಳನ್ನು ಗ್ರಾಮ ಲೆಕ್ಕಾಧಿಕಾರಿಗಳು ನೀಡಿರುವ ಬಗ್ಗೆ ಪರಿಶೀಲಿಸುವುದು.

ಎಲ್) ಸರ್ಕಾರಿ ಜಮೀನುಗಳಲ್ಲಿ ಯಾವುದೇ ಭೂಮಂಜೂರಿಯಾಗಿದ್ದಲ್ಲಿ ಭೂಮಾಪಕರು ಅಂತಹ ಸರ್ವೆ ನಂಬರುಗಳ ಅಳತೆ ಮಾಡಿ ನಕ್ಷೆ ತಯಾರಿಸಿ ಒತ್ತುವರಿಯಾಗಿದ್ದಲ್ಲಿ ಗುರುತಿಸಲಾಗಿದೆಯೇ, ಒತ್ತುವರಿ ಇಲ್ಲದಿದ್ದಲ್ಲಿ ಟಿಪ್ಪಣಿ ಮತ್ತು ಪಕ್ಕಾ ತಯಾರಿಸಲಾಗಿದೆಯೇ ಎಂಬುದನ್ನು ಪರಿಶೀಲಿಸುವುದು.

ಎಂ) ಭೂಸ್ವಾಧೀನಾಧಿಕಾರಿಗಳು ಅಳತೆ ದಿನಾಂಕದಂದು ಹಾಜರಿದ್ದಾರೆಯೇ ಎಂಬುದರ ಬಗ್ಗೆ ಪರಿಶೀಲಿಸುವುದು.

6. <u>ತಹಶೀಲ್ದಾರ್:-</u>

ಎ) ಪರಿಹಾರ ಪೋಡಿ ಆಂದೋಲನಕ್ಕಾಗಿ ಶಿರಸ್ತೇದಾರ್, ಕಂದಾಯ ನಿರೀಕ್ಷಕರು, ಗ್ರಾಮ ಲೆಕ್ಕಾಧಿಕಾರಿಗಳು ಮತ್ತು ಭೂಮಂಜೂರಾತಿ ವಿಷಯ ನಿರ್ವಾಹಕರನ್ನೊಳಗೊಂಡಂತೆ ಪ್ರತ್ಯೇಕವಾದ ತಂಡವನ್ನು ರಚಿಸುವುದು.

ಬಿ) ಗ್ರಾಮ ಲೆಕ್ಕಾಧಿಕಾರಿಗಳು ಮತ್ತು ಕಂದಾಯ ನಿರೀಕ್ಷಕರು ನಿಗದಿತ ನಮೂನೆಯಲ್ಲಿ ಗ್ರಾಮವಾರು ಮಾಹಿತಿಯನ್ನು ತಯಾರಿಸಿ ನಿಗದಿತ

## ನಮೂನೆಗಳನ್ನು ಭರ್ತಿ ಮಾಡುವ ಬಗ್ಗೆ ಮಾರ್ಗಸೂಚಿಗಳು

### ನಮೂನೆ - 1

ಈ ನಮೂನೆಯನ್ನು ಭೂಮಂಜೂರಾತಿ ಮಾಡಿರುವ ಪ್ರತಿ ಒಂದು ಸರ್ಕಾರಿ ಸರ್ವೆ ನಂಬರಿಗೂ ತಯಾರಿಸಬೇಕು. ಪ್ರತಿ ಒಂದು ಗ್ರಾಮದಲ್ಲಿರುವ ಸರ್ಕಾರಿ ಸರ್ವೆ ನಂಬರುಗಳಲ್ಲಿ ಮಾಡಿರುವ ಭೂಮಂಜೂರಾತಿ ಬಗ್ಗೆ ನಮೂನೆ-1 ರಲ್ಲಿ ಮಾಹಿತಿಯನ್ನು ಸಂಗ್ರಹಿಸುವುದು.

ಪ್ರತಿಯೊಂದು ಮಂಜೂರಿದಾರರ ವಿವರಗಳನ್ನು ಒಂದು ಸಾಲಿನಲ್ಲಿ ತುಂಬಬೇಕು. ಮಂಜೂರಿದಾರರ ಹೆಸರು ಈ ಕೆಳಕಂಡ ದಾಖಲೆಗಳಲ್ಲಿ ದೊರೆಯುತ್ತದೆ.

1) ಪೈಕಿ ಪಹಣಿಗಳಿಂದ ಅಥವಾ
2) ಅಧಿಕೃತ ಜ್ಞಾಪನದಿಂದ ಅಥವಾ
3) ಸಾಗುವಳಿ ಚೀಟಿಯಿಂದ ಅಥವಾ
4) ಮ್ಯುಟೇಷನ್ ನಕಲು ಅಥವಾ
5) ಭೂಮಂಜೂರಾತಿ ವಹಿಯಿಂದ ಪಡೆಯಬಹುದು.

ಮೇಲೆ ತಿಳಿಸಿರುವ ಯಾವುದಾದರೂ ಒಂದು ದಾಖಲೆಯಲ್ಲಿ ಮಂಜೂರಿದಾರರ ಹೆಸರು ನಮೂದಾಗಿದ್ದರೂ ಸದರಿ ಮಂಜೂರಿದಾರರ ಹೆಸರನ್ನು ನಮೂನೆ 1 ರಲ್ಲಿ ದಾಖಲಿಸುವುದು.

ಕೆಲವೊಂದು ಸಂದರ್ಭದಲ್ಲಿ ಕೆಳಕಂಡ ಎಲ್ಲಾ ದಾಖಲೆಗಳಲ್ಲಿ ಮಂಜೂರಿದಾರರ ಹೆಸರು ನಮೂದಾಗಿರುತ್ತದೆ.

1) ಪೈಕಿ ಪಹಣಿ ಅಥವಾ ಪೋಡಾದ ನಂತರದ ಪಹಣಿ(ಪೋಡಿ ದುರಸ್ತಿ ಆಗಿದ್ದಲ್ಲಿ)
2) ಭೂಮಂಜೂರಾತಿ ನಡವಳಿ ವಹಿ
3) ಅಧಿಕೃತ ಜ್ಞಾಪನ
4) ಸಾಗುವಳಿ ಚೀಟಿ
5) ಸಾಗುವಳಿ ಚೀಟಿ ವಿತರಣೆ ವಹಿ
6) ಮ್ಯುಟೇಷನ್ ವಹಿ

ಅನೇಕ ಸಂದರ್ಭದಲ್ಲಿ ಎಲ್ಲಾ ಮಂಜೂರಿದಾರರಿಗೆ ಮೇಲೆ ತಿಳಿಸಿರುವ 6 ದಾಖಲೆಗಳ ಪೈಕಿ ಕೆಲವು / ಅನೇಕ ದಾಖಲೆಗಳು ಲಭ್ಯವಿರುವುದಿಲ್ಲ, ಮೇಲೆ ತಿಳಿಸಿರುವ ಆರು ದಾಖಲೆಗಳ ಯಾವುದಾದರೂ ಒಂದು ದಾಖಲೆ ಲಭ್ಯವಿದ್ದಲ್ಲಿ ನಮೂನೆ 1 ರಲ್ಲಿ ಮಂಜೂರಿದಾರರ ಹೆಸರನ್ನು ನಮೂದಿಸಬೇಕು. ಆದಾಗ್ಯೂ, ಪ್ರತಿಯೊಂದು ಮಂಜೂರಿದಾರರಿಗೆ ಸಂಬಂಧಿಸಿದ ಮೇಲ್ಕಂಡ ಎಲ್ಲಾ ದಾಖಲೆಗಳನ್ನು ಪತ್ತೆ ಹಚ್ಚಲು ಪ್ರಯತ್ನಿಸಬೇಕು.

ಅಡವಿ ಕೆಲಸದ ಸಮಯದಲ್ಲಿ ಸಾರ್ವಜನಿಕರಿಗೆ ತಿಳುವಳಿಕೆ ಜಾರಿಮಾಡಿ ದಾಖಲೆಗಳನ್ನು ಮಂಜೂರಿದಾರರಿಂದಲೂ ಪಡೆಯಲು ಪ್ರಯತ್ನಿಸುವುದು.

ಪ್ರತಿ ಕಾಲಂನ ವಿವರಣೆ ಈ ಕೆಳಗಿನಂತಿರುತ್ತದೆ.

# FORM NO.3

## DETAILS OF LEASE OF GOVERNMENT LANDS

Original Survey Number: Village Name: Hobli Name:

| Name of the lessee | Lease order number | Date of lease | Period of Lease | Date of expiry of the lease | Extent | Name & extent in Col.11, of Government land RTC | Purpose of Lease |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| | | | | | | | |
| | | | | | | | |

# FORM NO.4

## DETAILS OF ACQUISITION

Original Survey Number :          Hobli Name :          Village Name :

| Sl No | No & Date of 4 (1) Notification | No & Date of 6 (1A) Notification | Purpose of Acquisition | Extent of Acquisition | For whom Acquired | Whether Demarcation certificate available | No. & Date of 17(1) | Whether JMC sketch available |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| | | | | | | | | |

## FORM NO. 5

## SUMMARY ABSTRACT

1 Total No. of Grantees : ......... (From Form No.1)

2 Total Extent granted : ..........(From Form No.1)

3 Total extent for which Durasti has been done : .........(From Form No.1)

4 Total extent available:
(In the original Gomal No.)
(a) As per RTC :
(b) As per Akarband :

5 No. of Applicants:
(a) Form 50 : .......... (From Form No.2)
(b) Form 53 : .......... (From Form No 2)

6 Total extent claimed:
(a) Form 50 : .......... (From Form No.2)
(b) Form 53 : .......... (From Form No 2)

7 (a) Number of Lessees : .......... (From Form No.3)
(b) Lease Extent : .......... (From Form No.3)

8 Total Extent Acquired : .......... (From Form No.4)

# ಕರ್ನಾಟಕ ವಿಧಾನಸಭೆ

| | | |
|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 189 |
| 2 | ಸದಸ್ಯರ ಹೆಸರು | ಶ್ರೀ ಹಾಲಾಡಿ ಶ್ರೀನಿವಾಸ ಶೆಟ್ಟಿ (ಕುಂದಾಪುರ) |
| 3 | ವಿಷಯ | ಜಮೀನು ಪೋಡಿ |
| 4 | ಉತ್ತರಿಸಬೇಕಾದ ದಿನಾಂಕ | 10.12.2018 |
| 5 | ಉತ್ತರಿಸುವ ಸಚಿವರು | ಕಂದಾಯ ಹಾಗೂ ಕೌಶಲ್ಯಾಭಿವೃದ್ಧಿ ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಂದಾಯ ಇಲಾಖೆಯ ದರಖಾಸ್ತು ಜಮೀನು ಮತ್ತು ಬಗರ್‌ಹುಕುಂ ಜಮೀನು ಪೋಡಿಯಾಗದೆ ಫಲಾನುಭವಿಗಳಿಗೆ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಹಾಗಿದ್ದಲ್ಲಿ ಯಾವಾಗ ಪೋಡಿ ಮಾಡಿಸಲು ಕ್ರಮ ಕೈಗೊಳ್ಳಲಾಗುವುದು? | ಸರ್ಕಾರದ ಪೋಡಿ ಮುಕ್ತ ಗ್ರಾಮ ಅಭಿಯಾನದ ಅಡಿಯಲ್ಲಿ ರಾಜ್ಯದ ಎಲ್ಲಾ ಖಾಸಗಿ ಜಮೀನುಗಳಲ್ಲಿ ಇರುವ ಬಹುಮಾಲೀಕತ್ವದ ಪಹಣಿಗಳ ಹಿಡುವಳಿದಾರರಿಗೆ ಹಂತ ಹಂತವಾಗಿ ಪೋಡಿ ಮಾಡಿ ಏಕಮಾಲೀಕತ್ವದ ಪಹಣಿಗಳನ್ನು ಸೃಜಿಸುವ ಯೋಜನೆಯು ಜಾರಿಯಲ್ಲಿರುತ್ತದೆ. ಈ ಪ್ರಕ್ರಿಯೆಯ ನಂತರ ಮಂಜೂರಾತಿ ಜಮೀನುಗಳಿಗೆ ಸಂಬಂಧಿಸಿದಂತೆ ಸುತ್ತೋಲೆ ಸಂ.ತಾಂತ್ರಿಕ. ದರಖಾಸ್ತು.ಪೋಡಿ.ಆಂದೋಲನ.40/2008-09 ದಿನಾಂಕ 20/10/2010 ಮತ್ತು ಸರ್ಕಾರದ ಸುತ್ತೋಲೆ ಸಂ. ಕಂಇ 283 ಭೂದಾಸ 2010 ದಿನಾಂಕ 23-11-2010 ಗಳ ಪ್ರಕಾರ ನಿಯಮಾನುಸಾರ ಕ್ರಮವಹಿಸಲಾಗುವುದು. |

ಕಂಇ 219 ಭೂಮಂಜೂ 2018

(ಆರ್.ವಿ. ದೇಶಪಾಂಡೆ)
ಕಂದಾಯ ಹಾಗೂ ಕೌಶಲ್ಯಾಭಿವೃದ್ಧಿ
ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು

# ಕರ್ನಾಟಕ ವಿಧಾನ ಸಭೆ

| | |
|---|---|
| 1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 472 |
| 2. ಮಾನ್ಯ ಸದಸ್ಯರ ಹೆಸರು | ಶ್ರೀ ವಿಶ್ವೇಶ್ವರ ಹೆಗಡೆ ಕಾಗೇರಿ (ಶಿರಸಿ) |
| 3. ಉತ್ತರಿಸಬೇಕಾದ ದಿನಾಂಕ | 10/12/2018 |
| 4. ಉತ್ತರಿಸುವವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಾರ್ಮಿಕ ಕಲ್ಯಾಣ ಮಂಡಳಿಯಿಂದ ಕಾರ್ಮಿಕರಿಗೆ ಸಿಗುವ ಸೌಲಭ್ಯಗಳು ಯಾವುವು (ವಿವರ ಒದಗಿಸುವುದು) | ಕಾರ್ಮಿಕ ಇಲಾಖೆಯ ಅಧೀನದಲ್ಲಿ ಬರುವ ಮೂರು ಮಂಡಳಿಗಳ ಮೂಲಕ ಹಲವಾರು ಯೋಜನೆಗಳನ್ನು ಜಾರಿಗೊಳಿಸಲಾಗುತ್ತಿದೆ. ಸದರಿ ಯೋಜನೆಗಳಡಿ ಕಾರ್ಮಿಕರಿಗೆ ಸಿಗುವ ಸೌಲಭ್ಯಗಳ ವಿವರಗಳು ಈ ಕೆಳಗಿನಂತಿವೆ.<br><br>1. <u>ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:</u> ಈ ಮಂಡಳಿಯಲ್ಲಿ ಫಲಾನುಭವಿಗಳಾಗಿ ನೊಂದಾಯಿತರಾದ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರಿಗೆ 15 ವಿವಿಧ ರೀತಿಯ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಆರ್ಥಿಕ ಸೌಲಭ್ಯಗಳನ್ನು ನೀಡಲಾಗುತ್ತಿದೆ. ಅವುಗಳ ವಿವರಗಳನ್ನು <u>ಅನುಬಂಧ –1 ರಲ್ಲಿ ಒದಗಿಸಿದೆ.</u><br><br>2. **ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ:**<br>ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಗೆ ನಿಯಮಾನುಸಾರ ವಂತಿಕೆ ಪಾವತಿಸುವ ಸಂಘಟಿತ ಕಾರ್ಮಿಕರಿಗೆ ಈ ಕೆಳಕಂಡ ಸೌಲಭ್ಯಗಳನ್ನು ಒದಗಿಸಲಾಗುತ್ತಿದೆ.<br><br>1. ಸಂಘಟಿತ ಕಾರ್ಮಿಕರ ಮಕ್ಕಳಿಗೆ ಶೈಕ್ಷಣಿಕ ಪ್ರೋತ್ಸಾಹ ಧನ ಸಹಾಯ.<br>2. ಸಂಘಟಿತ ಕಾರ್ಮಿಕರಿಗೆ ವೈದ್ಯಕೀಯ ನೆರವು.<br>3. ಮೃತ ಕಾರ್ಮಿಕರ ಅಂತ್ಯ ಸಂಸ್ಕಾರಕ್ಕೆ ಧನ ಸಹಾಯ.<br>4. ಕಾರ್ಮಿಕರ ಅಪಘಾತ ಧನ ಸಹಾಯ.<br>5. ವಾರ್ಷಿಕ ವೈದ್ಯಕೀಯ ತಪಾಸಣೆಯನ್ನು ನಡೆಸುವ ಟ್ರೇಡ್ ಯೂನಿಯನ್ / ಸಂಸ್ಥೆಗಳಿಗೆ ಧನ ಸಹಾಯ<br>6. ವಾರ್ಷಿಕ ಕ್ರೀಡಾ ಚಟುವಟಿಕೆ ಹಮ್ಮಿಕೊಳ್ಳುವ ನೋಂದಾಯಿತ ಕಾರ್ಮಿಕ ಸಂಘಗಳಿಗೆ ಧನಸಹಾಯ.<br>7. ಕಾರ್ಮಿಕರ ಶುಭ ಸಮಾರಂಭಗಳಿಗೆ ರಿಯಾಯಿತಿ ದರದಲ್ಲಿ ಸಮುದಾಯ ಭವನವನ್ನು ಬಾಡಿಗೆಗೆ ನೀಡಲಾಗುತ್ತದೆ.<br><br><u>3. ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:</u> ಈ ಮಂಡಳಿಯ ವತಿಯಿಂದ ಅಸಂಘಟಿತ ಕಾರ್ಮಿಕರಿಗೆ ಸಾಮಾಜಿಕ ಭದ್ರತೆ ಒದಗಿಸುವ ಕಲ್ಯಾಣ ಕಾರ್ಯಕ್ರಮಗಳನ್ನು ರೂಪಿಸಿ ಜಾರಿಗೊಳಿಸಲಾಗುತ್ತಿದೆ. ಅವುಗಳ ವಿವರ ಕೆಳಕಂಡಂತಿದೆ– |

| | | |
|---|---|---|
| | | 1. **ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ:–** ಈ ಯೋಜನೆಯಡಿ ಅಸಂಘಟಿತ ವಲಯದ ಕಾರ್ಮಿಕರೆಂದು ಗುರುತಿಸಲ್ಪಟ್ಟ ಖಾಸಗಿ ವಾಣಿಜ್ಯ ಸಾರಿಗೆ ವಾಹನ ಕಾರ್ಮಿಕರಾದ ಚಾಲಕರು, ನಿರ್ವಾಹಕರು ಹಾಗೂ ಕ್ಲೀನರ್‌ಗಳಿಗೆ ಅಪಘಾತ ಪರಿಹಾರ ಸೌಲಭ್ಯ ಒದಗಿಸಲಾಗುತ್ತಿದೆ. ಈ ಯೋಜನೆಯನ್ನು 2012–13ನೇ ಸಾಲಿನಿಂದ ಜಾರಿಗೊಳಿಸುತ್ತಿದೆ. ಈ ಯೋಜನೆಯಡಿ ದೊರಕುವ ಸೌಲಭ್ಯಗಳು ಈ ಕೆಳಗಿನಂತಿವೆ:–<br>• ಅಪಘಾತದಿಂದ ಚಾಲಕರು, ನಿರ್ವಾಹಕರು ಹಾಗೂ ಕ್ಲೀನರ್‌ಗಳು ಮರಣ ಹೊಂದಿದಲ್ಲಿ, ಅವರ ನಾಮನಿರ್ದೇಶಿತರಿಗೆ ರೂ.5.00 ಲಕ್ಷ ಪರಿಹಾರ.<br>• ಅಪಘಾತದಿಂದ ಶಾಶ್ವತ ದುರ್ಬಲತೆ ಹೊಂದಿದಾಗ, ಫಲಾನುಭವಿಗೆ ದುರ್ಬಲತೆಯ ಪ್ರಮಾಣಕ್ಕನುಗುಣವಾಗಿ ರೂ.2.00 ಲಕ್ಷದ ವರೆಗೆ ಪರಿಹಾರ.<br>• ಅಪಘಾತದಿಂದ ತಾತ್ಕಾಲಿಕ ದುರ್ಬಲತೆ ಹೊಂದಿದಾಗ, ಫಲಾನುಭವಿಗೆ ಗರಿಷ್ಠ 1.00 ಲಕ್ಷ ರೂ.ಗಳವರೆಗೆ ಆಸ್ಪತ್ರೆ ವೆಚ್ಚದ ಮರುಪಾವತಿ.<br>2. **ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ:–** ಈ ಯೋಜನೆಯಡಿ ಐದು ವರ್ಗಗಳ ಅಸಂಘಟಿಕ ಕಾರ್ಮಿಕರಾದ ಚಿಂದಿ ಆಯುವವರು, ಗೃಹಕಾರ್ಮಿಕರು, ಹಮಾಲಿಗಳು, ಟೈಲರ್‌ಗಳು ಹಾಗೂ ಮೆಕ್ಯಾನಿಕ್‌ಗಳನ್ನು ನೊಂದಾಯಿಸಿ ಸ್ಮಾರ್ಟ್ ಕಾರ್ಡ್ ನೀಡಲು ಕ್ರಮ ಕೈಗೊಳ್ಳಲಾಗಿದೆ. |
| ಆ) | ಕಾರ್ಮಿಕ ಕಲ್ಯಾಣ ಮಂಡಳಿಯಿಂದ ಕಾರ್ಮಿಕರಿಗೆ ಸಿಗುತ್ತಿರುವ ಸೌಲಭ್ಯಗಳು ವಿಳಂಬವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಈ ವಿಳಂಬಕ್ಕೆ ಕಾರಣಗಳೇನು (ವಿವರ ಒದಗಿಸುವುದು) | ಕಾರ್ಮಿಕ ಇಲಾಖೆಯ ಅಧೀನದಲ್ಲಿ ಬರುವ (1) ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ (2) ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ ಹಾಗೂ (3) ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಗಳ ವತಿಯಿಂದ ಜಾರಿಗೊಳಿಸಲಾಗುತ್ತಿರುವ ವಿವಿಧ ರೀತಿಯ ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ನೀಡಲಾಗುತ್ತಿದೆ. ಆ ಎಲ್ಲಾ ಸೌಲಭ್ಯಗಳು ಘಟನಾಧಾರಿತವಾಗಿದ್ದು, ಮಂಜೂರಾತಿಗಾಗಿ ಮಂಜೂರಾತಿ ಅಧಿಕಾರಿಗಳು ಕ್ಷೇತ್ರಾಧಿಕಾರಿಗಳಿಂದ ಪರಿಶೀಲನಾ ವರದಿ ಪಡೆದು, ಕ್ರಮವಹಿಸಬೇಕಾಗಿರುತ್ತದೆ. ಕಾರ್ಮಿಕರು ಸಲ್ಲಿಸುವ ಅರ್ಜಿಗಳ ಜೊತೆಗೆ ಅಗತ್ಯ ದಾಖಲೆಗಳು ಅವಶ್ಯವಾಗಿರುವುದರಿಂದ ಅವುಗಳನ್ನು ಪಡೆದು ಮಂಜೂರಾತಿ ಅಧಿಕಾರಿಗಳು ನಿಯಮಾನುಸಾರ ವಿಲೇವಾರಿ ಮಾಡಬೇಕಾಗಿರುತ್ತದೆ. ಪೂರ್ಣ ಪ್ರಮಾಣದ ದಾಖಲೆಗಳನ್ನು ಸಲ್ಲಿಸದಿರುವ ಪ್ರಕರಣಗಳಲ್ಲಿ ಮಾತ್ರ ವಿಲೇವಾರಿಯಲ್ಲಿ ವಿಳಂಬವಾಗುವ ಸಂಭವವಿರುತ್ತದೆ. ಕ್ರಮಬದ್ಧ ಹಾಗೂ ಪೂರ್ಣ ದಾಖಲೆಗಳನ್ನು ಸಲ್ಲಿಸಿದ ಕೂಡಲೇ ವಿಲೇವಾರಿಗಾಗಿ ಕ್ರಮವಹಿಸಲಾಗುತ್ತದೆ. |
| ಇ) | ಶಿರಸಿ ಸಿದ್ದಾಪುರ ತಾಲ್ಲೂಕಿನಲ್ಲಿ ಕಾರ್ಮಿಕರ ಸೌಲಭ್ಯಕ್ಕಾಗಿ ಬಂದಿರುವ ಅರ್ಜಿಗಳೆಷ್ಟು (ವಿವರ ನೀಡುವುದು) | ಶಿರಸಿ, ಸಿದ್ದಾಪುರ ತಾಲ್ಲೂಕುಗಳಲ್ಲಿ ವಿವಿಧ ಯೋಜನೆಗಳಡಿ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಆರ್ಥಿಕ ಸೌಲಭ್ಯಕ್ಕಾಗಿ ಬಂದಿರುವ ಅರ್ಜಿಗಳ ವಿವರವು ಈ ಕೆಳಕಂಡಂತಿದೆ:–<br>**ಶಿರಸಿ ತಾಲ್ಲೂಕು** (2015 ರಿಂದ 2018ರ ನವೆಂಬರ್ ಮಾಹೆಯ ವರೆಗೆ)<br><br>ಶೈಕ್ಷಣಿಕ: 604; ಮದುವೆ: 80; ಹೆರಿಗೆ: 03; ನಿವೃತ್ತಿ: 11; ವೈದ್ಯಕೀಯ: 12; ಮರಣ: 17 |

| ಶೈಕ್ಷಣಿಕ | ಮದುವೆ | ಹೆರಿಗೆ | ನಿವೃತ್ತಿ | ವೈದ್ಯಕೀಯ | ಮರಣ |
|---|---|---|---|---|---|
| 604 | 80 | 03 | 11 | 12 | 17 |

| | | |
|---|---|---|
| | | **ಸಿದ್ದಾಪುರ ತಾಲ್ಲೂಕು** (2015 ರಿಂದ 2018ರ ನವೆಂಬರ್ ಮಾಹೆಯವರೆಗೆ)<br><br>ಶೈಕ್ಷಣಿಕ / ಮದುವೆ / ಹೆರಿಗೆ / ವೈದ್ಯಕೀಯ / ಮರಣ<br>928 / 155 / 10 / 15 / 09<br><br>ವಿವರವನ್ನು **ಅನುಬಂಧ-2**ರಲ್ಲಿ ಒದಗಿಸಿದೆ.<br>**ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ:** 2018-19ನೇ ಸಾಲಿನಲ್ಲಿ ಶೈಕ್ಷಣಿಕ ಪ್ರೋತ್ಸಾಹ ಧನ ಸಹಾಯಕ್ಕಾಗಿ ಸಿದ್ದಾಪುರ ತಾಲ್ಲೂಕಿನಿಂದ ಒಂದು ಅರ್ಜಿ ಹಾಗೂ ಶಿರಸಿ ತಾಲ್ಲೂಕಿನಿಂದ ನಾಲ್ಕು ಅರ್ಜಿಗಳು ಸ್ವೀಕೃತವಾಗಿದ್ದು ಎಲ್ಲಾ ಅರ್ಜಿಗಳನ್ನು ವಿಲೇಮಾಡಲಾಗಿದೆ. |
| ಈ) | ಸರ್ಕಾರ ಯಾವ ಕಾಲಮಿತಿಯಲ್ಲಿ ಕಾರ್ಮಿಕರಿಗೆ ಸೌಲಭ್ಯವನ್ನು ಒದಗಿಸುವುದು (ವಿವರ ನೀಡುವುದು)? | • ಕರ್ನಾಟಕ ರಾಜ್ಯ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯ ವತಿಯಿಂದ ಫಲಾನುಭವಿಗಳಿಗೆ ವಿವಿಧ ರೀತಿಯ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಆರ್ಥಿಕ ಸೌಲಭ್ಯಕ್ಕಾಗಿ ಮಂಜೂರಾತಿ ಅಧಿಕಾರಿಗಳು ಸ್ವೀಕರಿಸಿದ ಕ್ರಮಬದ್ಧ ಅರ್ಜಿಗಳನ್ನು ವಿಲೇವಾರಿ ಮಾಡಲು ಕಾಲಮಿತಿಯನ್ನು ನಿಗಧಿಪಡಿಸಿರುವುದಿಲ್ಲ. ಆದಾಗ್ಯೂ, ಮಂಜೂರಾತಿ ಅಧಿಕಾರಿಗಳು ಸ್ವೀಕರಿಸಿದ ಅರ್ಜಿಗಳನ್ನು ಆದ್ಯತೆಯ ಮೇರೆಗೆ ವಿಲೇವಾರಿ ಮಾಡಲಾಗುತ್ತಿದೆ.<br><br>• ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಯ ವತಿಯಿಂದ ಪ್ರತಿ ವರ್ಷ ಜುಲೈ ಮಾಹೆಯಲ್ಲಿ ಶೈಕ್ಷಣಿಕ ಪ್ರೋತ್ಸಾಹದ ಧನ ಸಹಾಯದ ಅರ್ಜಿಗಳನ್ನು ಸ್ವೀಕರಿಸಿ ಅವುಗಳ ಪರಿಶೀಲನೆಯ ನಂತರ ಡಿಸೆಂಬರ್ ಅಂತ್ಯಕ್ಕೆ ಸೌಲಭ್ಯವನ್ನು ಒದಗಿಸಲಾಗುವುದು. |

**ಕಾಇ 421 ಎಲ್‌ಇಟಿ 2018**

(ವೆಂಕಟರಮಣಪ್ಪ)
ಕಾರ್ಮಿಕ ಸಚಿವರು

